# ಶ್ರೀ ಕನಕ ಮಹಿಮಾದರ್ಶ



ಲೇಖಕರು : ಶ್ರೀ ಭೀಮಾಚಾರ್ಯ ವಡವಿ

ಕರ್ನಾಟಕ ಸತ್ಪುರುಷ ಮಂಡಲ

ಭಾಗ--೭.

# ಶ್ರೀ
# ಕನಕಮಹಿಮಾದರ್ಶ.



ಲೇಖಕ —

ಭೀಮಾಚಾರ್ಯ ವಡವಿ,

ಹೆ|| ಮಾ|| ಶಿಡೇನೂರ.

ಪ್ರಕಾಶಕ —

ವಾಯ್. ಜಿ. ಕುಲಕರ್ಣಿ,

ಎಡಿಟರ ಸ ಚ., ಆನಂದವನ.

*1926.*

ಶ್ರೀ

# ಕನಕಮಹಿಮಾದರ್ಶ.



[೧ನೇ ಭಾಗ]

ಶ್ರೀಯನನವರತ ವಕ್ಷೋಭಾಗದೊಳ್ ಪಡೆದ |
ಶ್ರೀಯನೆಂದುಂ ವದನವಾರುಹದೊಳಿಟ್ಟಜನು |
ಶ್ರೀಯನಾಗಳು ಭುಜದೊಳಪ್ಪಿ ಧರಿಸಿರ್ಪ...ದೋರ್ಬಳದ ನರಸಿಂಹನು ||
ಶ್ರೀಯುಮಂ ವರವಚಶ್ರೀಯುಮಂ ಸುತಜಯ |
ಶ್ರೀಯುಮಂ ಕೊಟ್ಟಖಿಳ ಲೋಕಧಾರಿಣಿಶ ಯಶ |
ಶ್ರೀಯುಮಂ ಪಾಂಡವರ್ಗಿತ್ತವೊಲಿತ್ತು ಸಲಹುಗೆ ಸಕಲಸಜ್ಜನರನು ||೧||

(ಜೈಮಿನಿಭಾರತ)




ಭಗವಂತನ ಪಾದಾರವಿಂದವನ್ನು ಸೇರಬೇಕಾದರೆ, ಉತ್ತಮ ವರ್ಣದಲ್ಲಿಯೇ ಹುಟ್ಟಬೇಕು; ದೊಡ್ಡ ವಿದ್ವಾಂಸನೇ ಆಗಬೇಕು ಹೀಗೆಂಬ ನಿಯಮವೇನೂ ಇಲ್ಲ; ಯಾವ ವರ್ಣದಲ್ಲಿಯೇ ಹುಟ್ಟಲಿ, ಎಂಥ ಮೂಢಮತಿಯೇ ಆಗಲಿ ಭಗವಂತನಲ್ಲಿ ನಿಜವಾದ ಭಕ್ತಿಯೊಂದನ್ನಿಟ್ಟರೆ ಸಾಕು; ಆತನ ಪಾದವನ್ನು ಸೇರುವದೇಕೆ? ಆತನೇ ಇವರ ಬೆನ್ನುಹತ್ತಿ ತಿರುಗಲಾರಂಭಿಸುವನು. ಈ ವಿಷಯದಲ್ಲಿ ಪ್ರಾಚೀನ ಮಹಾಪುರುಷರ ಚರಿತ್ರಗಳೆಷ್ಟೋ ಇರುವವು. ಆದರೂ ಅವು ಚರ್ವಿತಚರ್ವಣ ದೋಷದಿಂದ ನಮ್ಮ ವಾಚಕರ ಮನಸ್ಸನ್ನು ಬೇಸರಗೊಳಿಸುವವೇ ಹೊರತು ಒಬ್ಬ ಒಡ ಕುರುಬನ ಹೊಟ್ಟೆಯಲ್ಲಿ ಹುಟ್ಟಿದ ಕನಕದಾಸನ ಚರಿತ್ರೆಯಷ್ಟು ಮನರಂಜನೆಯನ್ನುಂಟುಮಾಡಲಾರವು. ಕಾರಣ ಆತನ ಚರಿತ್ರೆಯನ್ನೇ ತಿಳಿದಮಟ್ಟಿಗೆ ಇದರ ಅಡಿಯಲ್ಲಿ ಸಂಗ್ರಹವಾಗಿ ಕೊಡಲಿಚ್ಛಿಸುತ್ತೇನೆ.

ಧಾರವಾಡ ಜಿಲ್ಲೆಯ ಬಂಕಾಪುರ ತಾಲೂಕಿನೊಳಗೆ 'ಬಾಡ'ವೆಂಬುವ ವೊಂದು ಸಣ್ಣ ಹಳ್ಳಿಯುಂಟು. ಅದನ್ನು ಈಗಿನ ಧಾರವಾಡ ಜಿಲ್ಲೆಯ ನಕ್ಷೆಯೊಳಗೆ ನೋಡಬಹುದು. ಈ ಹಳ್ಳಿಯಲ್ಲಿ ಕುರುಬಗೌಡನೆಂದು ಹೆಸರಾದ ಬೀರಪ್ಪನೆಂಬುವನೊಬ್ಬ ರೈತನಿದ್ದನು. ಅಲ್ಲಿಯವರೆಲ್ಲರೂ ಈತನಿಗೆ ಬೀರಪ್ಪನೆಂದು ಕರೆಯದೆ † ನಾಡಗೌಡನೆಂದೇ ಗೌರವಿಸಿ ಕರೆಯುತ್ತಿದ್ದರು. ಆತನಿಗೆ ಮಹಾ-ಸಾಧ್ವಿಯಾದ ಬಚ್ಚಿಯೆಂಬೊಬ್ಬ ಹೆಂಡತಿ ಇದ್ದಳು. ಈ ದಂಪತಿಗಳು ಬಡವರಾದರೂ ಧರ್ಮಮಾರ್ಗದಲ್ಲಿ ನಡೆವವರಾಗಿದ್ದರು. ದೇವ-ಬ್ರಾಹ್ಮಣರಲ್ಲಿ ಅಚಲವಾದ ಭಕ್ತಿ. ದಾನ-ಧರ್ಮದಲ್ಲಿ ಪ್ರೀತಿ ಬಹಳ. ಒಬ್ಬರಿಗೊಂದಾದರೂ ನಿಷ್ಠುರವಾಡರು. ಪರಹಿತವೇ ಪ್ರಗತಿಗೆ ಸಾಧನವೆಂದು ನಂಬಿ ನಡೆಯುತ್ತಿರುವರು. ಲೋಕದಲ್ಲಿ ಸಜ್ಜನರ ಎಷ್ಟು ಮಂದಿ ಇರುವದಿಲ್ಲ? ಅಂದಮೇಲೆ ದೇವರು ಪ್ರೀತನಾಗಬೇಡವೇ? ತುಸ ದಿವಸಗಳಲ್ಲಿಯೇ ಬೀರಪ್ಪನಿಗೆ * ಆನೆಗೊಂದಿಯ ಮಹಾರಾಜನಲ್ಲಿ

---

† ಚಾಲುಕ್ಯರ ಕಾಲದಲ್ಲಿಯೇ ನಮ್ಮ ಕರ್ನಾಟಕದೊಳಗೆ ಗ್ರಾಮಪದ್ಧತಿಯು ಬಲು ಅಂದವಾಗಿ ನೆಲೆಗೊಂಡಿತ್ತು:—

ಒಂದು ದೊಡ್ಡ ಹಳ್ಳಿಗಾಗಲಿ, ಕೆಲವು ಸಣ್ಣ ಹಳ್ಳಿಗಳಿಗಾಗಲಿ ಒಂದು ಗ್ರಾಮಸಂಘವಿರುತ್ತಿತ್ತು. ಇಂಥ ಸಂಘಗಳುಳ್ಳ ಎಷ್ಟೋ ಊರುಗಳಿಗೆ ಕೂಡಿ "ನಾಡು" ಎಂಬ ಹೆಸರು ಕೊಟ್ಟಿದ್ದರು. ಗ್ರಾಮಸಂಘಗಳು:—ಊರೊಳಗಿನ ನ್ಯಾಯಾನ್ಯಾಯಗಳನ್ನು ವಿಚಾರಿಸುವದೂ, ಹೊಸ ಭೂಮಿಗಳನ್ನು ಸಾಗುಮಾಡಿಸುವದೂ, ಪಡಭೂಮಿಗಳನ್ನು ರೈತರಿಗೆ ಕೊಡುವದೂ, ಸಾರ್ವಜನಿಕ ಕೆಲಸ ಮಾಡುವದೂ, ಕರಗಳನ್ನು ವಸೂಲ ಮಾಡುವದೂ ಇವೇ ಮೊದಲಾದವುಗಳನ್ನು ಮಾಡುತ್ತಿದ್ದವು. ಇವರ ಕೆಲಸವನ್ನೂ, ಲೆಕ್ಕಪತ್ರಗಳನ್ನೂ ನಾಡಿನ ಸಂಘದವರು ವಿಚಾರಿಸುತ್ತಿದ್ದರು. ಗ್ರಾಮಸಂಘಕ್ಕೆ ವರ್ಷಕ್ಕೊಮ್ಮೆ ಊರ ಜನರು ಆರಿಸಲ್ಪಡುತ್ತಿದ್ದರು.

[ಬರಬರುತ್ತ ಸುಧಾರಣೆಯು ಹೆಚ್ಚಾದ ಈ ೨೦ನೇ ಶತಮಾನದಲ್ಲಿ ಇವುಗಳ ಬದಲು ತಾಲೂಕ ಡಿಸ್ಟ್ರಿಕ್ಟ್‌ಲೋಕಲ್‌ಬೋರ್ಡುಗಳು ನಿರ್ಮಿತವಾಗಿರುವವು]

ಬೀರಪ್ಪನು —ಇಂಥ ನಾಡಿನ ಸಂಘದೊಳಗೆ ಒಬ್ಬ ಮುಖ್ಯಸ್ಥ(ಮೇಂಬರ)ನಾದ್ದರಿಂದಲೇ ಅವನಿಗೆ ನಾಡಗೌಡನೆನ್ನುತ್ತಿದ್ದರು.

* ಹೊಸಪೇಟೆಯ ಸಮೀಪದಲ್ಲಿ ತುಂಗಭದ್ರಾನದಿಯ ಉತ್ತರ ತೀರದಲ್ಲಿ ಈ ಪಟ್ಟಣವುಂಟು. ಇದು ಶ್ರೀರಾಮನ ಕಾಲದಲ್ಲಿ ಪ್ರಸಿದ್ಧಹೊಂದಿದ ಕಿಷ್ಕಿಂಧೆಯೆಂದು ಕಿಂವದಂತಿಯುಂಟು. ಮತ್ತು ಪಾಂಡವರು ಅಜ್ಞಾತವಾಸಾನಂತರ ಸಿಂಹಾಸನವನ್ನು ಸ್ಥಾಪಿಸಿದ ಉಪಪ್ಲವ್ಯ ಪಟ್ಟಣವೇ ಇದೆಂತಲೂ, ಇಲ್ಲಿ ಬಹುಕಾಲ ಪಾಂಡವರ ವಂಶದವರೇ ಆಳಿದರೆಂತಲೂ, ಇದಕ್ಕೆ 'ದಕ್ಷಿಣಹಸ್ತಿನಾವತಿ, ಎಂಬ ಹೆಸರಿತ್ತೆಂತಲೂ ಗೊತ್ತಾಗಿರುವದು.

# ಮುನ್ನುಡಿ.



ಭಕ್ತಿಮಾರ್ಗವು ಇತರ ಎಲ್ಲ ಸಾಧನೆಗಳಿಗಿಂತ ಹಗುರಾದದ್ದೂ, ನಿಶ್ಚಯವಾಗಿ ಫಲಪ್ರದವಾದದ್ದೂ, ದೇವರ ಸನ್ನಿಧಿಯಲ್ಲಿ ಒಯ್ದು ಬಿಡಲು ಯೋಗ್ಯವಾದದ್ದೂ ಇದ್ದು, ಈ ಭಕ್ತಿಪಂಥವನ್ನೇ ಅಭಿವೃದ್ಧಿಗೆ ತರಲು ಎಲ್ಲ ಸಾಧು-ಸಂತರೂ ಪ್ರಯತ್ನಪಡುತ್ತಲಿರುವರು ಇಂಥ ಸಾಧು-ಸಂತರಲ್ಲಿ ಪ್ರಸ್ತುತದ ಚರಿತ್ರನಾಯಕನು ಶ್ರೇಷ್ಠತರಗತಿಯುವನೆಂಬದು ನಮ್ಮ ವಾಚಕರಿಗೆ ಮನವರಿಕೆಯಾಗದೆ ಇರದು! ಇಂಥ ಮಹಾಮಹಿಮನ ಚರಿತ್ರವು, ಸದ್ಬೋಧ ಚಂದ್ರಿಕೆಯಲ್ಲಿ ಪ್ರಕಟವಾಗಲು ಅನುಕೂಲತೆಯನ್ನು ಒದಗಿಸಿ ಕೊಟ್ಟ ಶ್ರೀಮಾನ್ ಭೀಮಾಚಾರ್ಯ ವಡವಿ ಇವರನ್ನು ಮನಃಪೂರ್ವಕವಾಗಿ ಅಭಿನಂದಿಸುವೆವು.

ಮಿ ಭೀಮಾಚಾರ್ಯರ ಪರಿಚಯವು ಈಗೆರಡು ವರುಷಗಳಿಂದ ನಮ್ಮ ವಾಚಕರಿಗಿರುವದು ಶ್ರೀಮತ್ ಹನುಮದಾಸರ ಚರಿತ್ರ ಹಾಗು ಪ್ರಸ್ತುತದ ಶ್ರೀ ಕನಕಮಹಿಮಾದರ್ಶವೆಂಬೆರಡು ಪುಸ್ತಕಗಳನ್ನು ಕೃತಾರ್ಥಬುದ್ಧಿಯಿಂದ ಬರೆದುಕೊಟ್ಟು, ಚಂದ್ರಿಕೆಯನ್ನು ಋಣಿಯನ್ನಾಗಮಾಡಿರುವರು ಇವರು ನುರಿತ ಲೇಖಕರಿರುವರಲ್ಲದೆ, ಭಾವಿಕರೂ ಇರುವರು ಇಂಥ ಸದ್ಭಾವನೆಯ ಲೇಖಕರು ಬರೆದ ಪುಸ್ತಕಗಳು ನಮ್ಮ ವಾಚಕರನ್ನು ನಿಜವಾಗಿಯೂ ತೃಪ್ತಿಪಡಿಸದ ಇರಲಾರವು!

ಶ್ರೀ ಕನಕಮಹಿಮಾದರ್ಶವು ಭಾವಿಕರ ಚಿತ್ತವನ್ನು ನಿಶ್ಚಯವಾಗಿ ಆಕರ್ಷಿಸುವದು ಭಗವಂತನ ಪ್ರೀತಿಗೆ ಭಕ್ತಿಯೇ ಮೂಲಕಾರಣವೆಂಬದನ್ನು ಈ ಆದರ್ಶದಲ್ಲಿ ಚನ್ನಾಗಿ ನೋಡಬಹುದು ಹೀನ ಜಾತಿಯುವನಾದ ಕನಕನು ಭಕ್ತಿಯ ಬಲದಿಂದ ದಶಗ್ರಂಥಿ ಬ್ರಾಹ್ಮಣನಿಗಿಂತಲೂ ಭಗವಂತನಿಗೆ ಅಧಿಕ ಪ್ರಿಯನಾದನು ಭಗವಂತನು ಭಕ್ತಿಯನ್ನೇ ನೋಡುವನಲ್ಲದೆ, ವಿಶಿಷ್ಟ ಜಾತಿ-ಪಂಥ-ವಿದ್ಯೆಗಳನ್ನು ನೋಡಲಾರನೆಂಬದನ್ನು ಈ ಕನಕನ ಚರಿತ್ರವು ಸಾರಿ ಹೇಳುವದು ನಾನು ಶ್ರೇಷ್ಠನು, ನಮ್ಮ ಜಾತಿ-ಪಂಥಗಳು ಶ್ರೇಷ್ಠವು, ಎಂದು ಬಡಿದಾಡುವ ಜನರು ಈ ಚರಿತ್ರದಿಂದ ಬುದ್ಧಿಗಲಿಯಬಹುದೆಂದು ಆಶಿಸುತ್ತೇನೆ

ಸಜ್ಜನ ವಿಧೇಯ,

**ಶ್ರೀ ಕ್ಷೇತ್ರ ಆನಂದವನ.**
ಮಾಘ ಶುದ್ಧ ೩ ಶಕೆ ೧೮೪೭

**ಆರ್. ಟಿ. ಕರ್ಪೂರ,**
ಸಬ್ ಎಡಿಟರ ಸ. ಚ.

# ವಿಷಯಾನುಕ್ರಮಣಿಕೆ.







ಮನೆಗಾರನ ಅಧಿಕಾರವು ದೊರೆಯಿತು. ಆಗ ಈತನು ೭೮ ಗ್ರಾಮಗಳಿಗೆ ಶಿಸ್ತು ಸಲ್ಲಿಸತಕ್ಕ ದೊಡ್ಡ ರೈತನೆಂದು ಹೆಸರುವಾಸಿಯಾದನು. ಈತನು ಜಾತಿಯಿಂದ ಮಾತ್ರ ಕುರುಬನಾಗಿದ್ದನಲ್ಲದೆ ಮಾತು-ಕಥೆ ಕೆಲಸ-ಬೊಗಸೆಗಳಲ್ಲಿ ಹಾಗಿದ್ದಿಲ್ಲ; ಅಲ್ಲದೆ ಮಹಾಸತ್ಪುರುಷನು, ಮೇಲೆ ದೈವಬಲವೊಂದು. ಬಳಿಕ ಕೇಳುವದೇನು? ಕೈಕೊಂಡ ಕೆಲಸದಲ್ಲಿ ಕೀರ್ತಿಯನ್ನು ಸಂಪಾದಿಸಿ ಒಳ್ಳೆಯ ಸಿರಿವಂತನಾದನು. ಈತನ ಭಕ್ತಿ-ವಿಶ್ವಾಸಕ್ಕೆ ಮೆಚ್ಚಿ, ಬ್ರಹ್ಮತಂತ್ರಿ, ಶ್ರೀನಿವಾಸಾಚಾರ್ಯರೆಂಬುವರು ಈತನಿಗೆ ಚಕ್ರಾಂಕಿತ ಮಾಡಿದ್ದರಿಂದ ಬೀರಪ್ಪನು ವೈಷ್ಣವಮತವನ್ನವಲಂಬಿಸಿ, ತಿರುಪತಿಯ ಶ್ರೀ ವೇಂಕಟದೇವರಿಗೆ ನಡಕೊಳ್ಳಹತ್ತಿದನು.

ಮನೆಯಿಂದ ಸಿರಿವಂತನಾದಾಗ್ಯೂ ಮನಸ್ಸಿನ ಕರಕರಿಯು ಮಾತ್ರ ತಪ್ಪಲಿಲ್ಲ. ಅದು ಹೆಚ್ಚುತ್ತಲೇ ಹೋಯಿತು. ಬೀರಪ್ಪನ ಈ ಮನದುಮ್ಮಳಕ್ಕೆ ಪ್ರೀತಿಯ ಅಣುಗನಿಲ್ಲದ್ದೇ ಕಾರಣವೆಂದು ನಮ್ಮ ವಾಚಕರು ಈಗಾಗಲೇ ಊಹಿಸಿರಬಹುದು. ಅವರ ಊಹೆಯು ನಿಜವಾದದ್ದು. ಸಿರಿವಂತರಾದವರೆಲ್ಲರೂ ಅದೃಷ್ಟವಂತರಾಗುವ ರೆಂದು ಹೇಳುವದಕ್ಕಾಗುವದಿಲ್ಲ ಸಿರಿಯಿದ್ದಲ್ಲಿ ಸಂತಾನವಿರುವದೂ, ಸಂತಾನವಿದ್ದಲ್ಲಿ ಸಿರಿಯಿರುವದೂ ಈ ಬ್ರಹ್ಮಸೃಷ್ಟಿಯಲ್ಲಿ ಸ್ವಲ್ಪ ಅಪರೂಪವೇ ಸರಿ. ಬೀರಪ್ಪನೂ ಇದೇ ನಿಯಮಕ್ಕೆ ಒಳಗಾಗಿದ್ದನು. ಆತನಿಗೆ ಈಗ ದೇವರ ದಯೆಯಿಂದ ಎಲ್ಲ ಸಂಪತ್ತೂ ಉಂಟು. ಆದರೇನು? ಮಕ್ಕಳಿಲ್ಲದ್ದೊಂದು ಚಿಂತೆ ಮಕ್ಕಳಿಂದಲೇ ಮದುವೆ ಮುಂಜಿ, ಮಕ್ಕಳಿಂದಲೆ ಹಬ್ಬ ಹುಣ್ಣಿವೆಗಳು ಎಲ್ಲವೂ ಮಕ್ಕಳಿಂದಲೇ. ಮಕ್ಕಳಿಲ್ಲದವನಿಗೆ ಒಕ್ಕಳ ಹೊನ್ನಿದ್ದರೂ ಲೆಕ್ಕದೊಳಗಲ್ಲ. ರೊಕ್ಕವು ದುಃಖಕ್ಕೆ ಕಾರಣವಲ್ಲದೆ ಅಕ್ಕರತೆಗೆ ಆಗರವಾಗಲಾರದು ಇವೇ ಮೊದಲಾದ ಮಾತುಗಳೆಲ್ಲ ಬೀರಪ್ಪನ ಮನದಲ್ಲಿ ಒಳಿತಾಗಿ ನಟ್ಟಿದ್ದವು. ಕೂತಲ್ಲಿ ನಿಂತಲ್ಲಿ ಅವನಿಗೆ ಇದೇ ಯೋಚನೆ. ಯಾವ ಕೆಲಸದಲ್ಲಿಯೂ ಉತ್ಸಾಹವಿಲ್ಲ. ಊಟ-ಉಡಿಗೆಯಲ್ಲಿಯೂ ಮನಸ್ಸಿಲ್ಲ. ಸುಮ್ಮನೆ ನಿಮಿತ್ತಮಾತ್ರಕ್ಕೆ ಓಡ್ಯಾಡುವನು, ಕೆಲಸ ಮಾಡುವನು. ಹೀಗೆಯೇ ಕೆಲವು ದಿವಸಗಳು ಕಳೆದವು. ಕಡೆಗೆ ಒಂದಾನೊಂದು ದಿವಸ ಯೋಚನೆ ಮಾಡಿ ತನ್ನ ಹೆಂಡತಿಯೊಡನೆ ಏಕಾಂತದಲ್ಲಿ—"ಎಲೈ ಕಾಂತೆ! ಎಷ್ಟು ಸಿರಿಯಿದ್ದೇನು ಪ್ರಯೋಜನ? 'ಮಕ್ಕಳಿಲ್ಲದ ಸಕಲ ಸಿರಿಶವ | ಕಿಕ್ಕಿದಖಿಳಾಭರಣ ವಿಭ್ರಮ:...' ವೆಂಬಂತೆ ಮಕ್ಕಳಿಲ್ಲದ ಮನೆಯು ವ್ಯರ್ಥವಲ್ಲವೇ? ನಮ್ಮ ಲಕ್ಕುಮಿಗೆ ತಕ್ಕಂತೆ ದೇವರು ಮಕ್ಕಳೊಂದನ್ನು ಕೊಟ್ಟಿದ್ದರೆ ಎಂಥ ಚೊಕ್ಕವಾಗುತ್ತಿತ್ತು ನೋಡು. ಅಹಾ! ಮುದ್ದು ಮಕ್ಕಳನ್ನು ಪಡೆದು ಅವರ ಬಾಲಲೀಲೆಗಳನ್ನು ಕಣ್ಣು ತುಂಬಾ

ನೋಡುವ ಆನಂದವು ನಮ್ಮ ದೈವದಲ್ಲಿಯೇ ಇಲ್ಲ ಬರಿದೆ ಹಂಬಲಿಸಿದರೆ ಬರುವದೇನು? ಅದಕ್ಕೂ ಜಗದೀಶನ ಕರುಣವಿರಬೇಕು ಮನುಷ್ಯರು ತಮ್ಮ ತಮ್ಮ ಪೂರ್ವಾರ್ಜಿತಕ್ಕೆ ಸರಿಯಾಗಿ ಫಲಗಳನ್ನು ಪಡೆಯುವರೆಂದು ಕೇಳಿಯುಂಟು. ಆದರಿಂದ * ತಿರುಪತಿಗೆ ಹೋಗಿ ದೇವದೇವೋತ್ತಮನಾದ ಶ್ರೀ ವೆಂಕಟರಮಣ ಸ್ವಾಮಿಯಲ್ಲಾದರೂ ಮೊರೆಯಿಡೋಣ ನಡೆ ಎಂದು ನುಡಿದನು.'' ಹೆಂಡತಿಯೂ ಅದಕ್ಕೊಪ್ಪಿದಳು. ಕೂಡಲೆ ಅವರಿಬ್ಬರೂ ತಿರುಪತಿಗೆ ಹೊರಟರು. ತಿರುಪತಿಯು ಯಾವಾಗ್ಯೆ ಬಂದೀತು? ಸ್ವಾಮಿಯನ್ನು ಯಾವಾಗ ನೋಡ ವೆವು? ಎಂಬ ಧ್ಯಾನದಲ್ಲಿಯೇ ಅವರು ತಿರುಪತಿಯನ್ನು ಮುಟ್ಟಿಬಿಟ್ಟರು. ಅಲ್ಲಿಗೆ ಹೋದವರು ಕಾಲು ಬಾಡಿಗೆಯೆಂದ ಮೊದಲು ಕಣಜಕ್ಕೆ ಏನಾದರೂ ದಕ್ಷಿಣೆ ಹಾಕುವ ಸಾಂಪ್ರದಾಯವುಂಟು. ಅದರಂತೆ ಕಾಲು ಬಾಡಿಗೆಯನ್ನೂ ಮುಡುಪನ್ನೂ ಕೊಟ್ಟು ದೇವರ ದರ್ಶನ ತಕ್ಕೊಂಡರು. ಹಾಗೂ ಅಂದಿನಿಂದಲೇ ಗಂಡ-ಹೆಂಡರಿಬ್ಬರೂ ನಾರುಬಟ್ಟೆಯನ್ನುಟ್ಟು ತಿರುನಾಮವನ್ನು ಹಚ್ಚಿ ಸರ್ವ ತೀರ್ಥಾಟಣ ಮಾಡುತ್ತಾ ಸಂತೋಷದಿಂದ ಸ್ವಾಮಿಯನ್ನು ಸ್ತುತಿಸುತ್ತಿದರು. ದೇವತಾರಾಧನೆಯು ಆರಂಭವಾಯಿತು. ಬೀರಪ್ಪನಂತೆ ಬಚ್ಚಿಯಾದರೂ ಅಚ್ಚಬಕುತಿಯವಳು. ದಿನವಾಯಿತು. ಎರಡುದಿನವಾಯಿತು. ಹೀಗೆಯೇ ಒಂದು ತಿಂಗಳೂ ಮುಗಿಯಿತು. ಸೇವೆ ಮಾಡುವಲ್ಲಿ ತುಸುವಾದರೂ ಮನಸನ್ನು ಹಿಂದೆಗೆಯಲಿಲ್ಲ. ಉದಾಸೀನರಾಗಲಿಲ್ಲ. ಅಧಿಕವಾದ ಸಂತೋಷ. ಭಕ್ತವತ್ಸಲನೆಂದರೂ ಎಲ್ಲಿಯವರೆಗೆ ನೋಡುವನು? ಕಡೆಗೆ ನಿಚ್ಚಟವಾದ ಬಕುತಿಗೆ ಅಚ್ಚರಿಪಟ್ಟು ಬೀರಪ್ಪನ ಕನಸಿನಲ್ಲಿ ಬಂದು ಒಂದು ಫಲವನ್ನು ನೀಡಿ, ಇದರೊಳಗರ್ಧವನ್ನು ಹೆಂಡತಿಗೆ ಕೊಟ್ಟು ಉಳಿದದ್ದನ್ನು ನೀನು ತಕ್ಕೋ ನಿನಗೆ ಸಾಧು-ಸಂತನಾದೊಬ್ಬ ಮಗನು ಹುಟ್ಟುವನು ಎಂದು ಹೇಳಿ ಹೋದನು. ಬೆಳಗಾಗ ತ್ತಲೇ ಬೀರಪ್ಪನು ಎದ್ದು ನೋಡುತ್ತಾನೆ? ಕೈಯಲ್ಲಿ ಫಲವು. ಇದೇನೆಂದು ಅರುಗ ಬೆರಗಾಗಿ ನೋಡುತ್ತಿರುವಲ್ಲಿ ಸ್ವಪ್ನದ ಸಂಗತಿಯು

* ಭರತಖಂಡದಲ್ಲಿ ನಾಲ್ಕು ದಿವ್ಯಕ್ಷೇತ್ರಗಳುಂಟೆಂದು ಪೂರ್ವಾಚಾರ್ಯರು ಸ್ತುತಿಸಿರುವರು.
ಶ್ರೀರಂಗಮಂಗಲಮಣಿಂ ಕರುಣಾನಿವಾಸಂ | ಶ್ರೀವೇಂಕಟಾದ್ರಿ ಶಿಖರಾಲಯ ಕಾಲಮೇಘಂ ||
ಶ್ರೀಹಸ್ತಿಶೈಲ ಶಿಖರೋಜ್ವಲ ಪಾರಿಜಾತಂ | ಶ್ರೀಶಂನಮಾಮಿ ಶಿರಸಾ ಯದುಶೈಲದೀಪಂ ||೧||
ಶ್ರೀರಂಗ, ವೇಂಕಟಗಿರಿ, ಹಸ್ತಿಗಿರಿ,[ಕಂಚಿ] ಯದುಗಿರಿ,[ಮೇಲುಕೋಟೆ]
ತಿರುಪತಿ(ವೇಂಕಟಗಿರಿ)ಯು ಮದರಾಸಿನ ಹತ್ತಿರವಿದೆ. ಇದನ್ನೇ ಭೂ ವೈಕುಂಠವೆಂದು ದಾಸರು ಹೊಗಳಿರುವರು.

ತಿಳಿಯಿತು. ಆಗ ಆತನಿಗಾದ ಆನಂದವನ್ನು ಹೇಳತೀರದು. ಬಯಸಿದೊಡವೆಯೇ ಬಳಿಗೆ ನಡೆದು ಬಂದರೆ ಯಾರಿಗೆ ಆನಂದವಾಗಲಿಕ್ಕಿಲ್ಲ? ತನ್ನ ಬಯಿಕೆ ನೆರವೇರಿ ತೆಂದು ಹಿರ್ರನೆ ಹಿಗ್ಗಿ ಹೆಂಡತಿಗರ್ಧ ಫಲವನ್ನು ಕೊಟ್ಟು ತಾನರ್ಧ ಭುಂಜಿಸಿದನು. ಮತ್ತು ಮರುದಿನವೇ ದೇವರಿಗೆ ನೈವೇದ್ಯಾದಿಗಳನ್ನು ಮಾಡಿಕೊಂಡು ಊರಿಗೆ ಹೊರಟನು.

ಲೋಕಪಾಲಕನ ವಾಕ್ಯಕ್ಕೆ ಎಂದಾದರೂ ಲೋಪವುಂಟೇ? ಹೇಗಾದೀತು! ಮುಂದೆ ಕೆಲವು ದಿವಸಗಳು ಕಳೆಯುತ್ತಿರಲು ಬೀರಪ್ಪನ ಹೆಂಡತಿಯು ಬಸುರಾದಳು ನವಮಾಸವೂ ತುಂಬಿತು. ಸುಖರೂಪವಾಗಿ ಗಂಡು ಮಗನನ್ನೇ ಹೆತ್ತಳು ಆಗ ಬೀರಪ್ಪನಿಗೆ ಇನ್ನೆಷ್ಟು ಸಂತೋಷವಾಗಿರಬೇಡ! ಮಕ್ಕಳು ಮಕ್ಕಳೆಂದು ಬಯಸಿ ಬಹು ದಿವಸಕ್ಕೆ ಮಕ್ಕಳನ್ನು ಪಡೆದವರೇ ಆತನ ಆನಂದವನ್ನು ತಿಳಿಯಬಲ್ಲರಲ್ಲದೆ ಇತರರು ತಿಳಿಯಲಾರರು. ಬೀರಪ್ಪನು ಕೂಡಲೆ ಬ್ರಾಹ್ಮಣರನ್ನು ಕರೆಯಿಸಿ ಮಗುವಿಗೆ ಜಾತಕ ಬರೆಸಿ ಧನ-ಕನಕಾದಿಗಳನ್ನು ದಾನ ಮಾಡಿದನು ಎಷ್ಟೋ ಉತ್ಸವಾದಿಗಳನ್ನು ಮಾಡಿದನು. ಬ್ರಾಹ್ಮಣರು ಆ ಮಗುವಿಗೆ ತಿಮ್ಮನೆಂದು ಹೆಸರಿಟ್ಟರು. ತಿಮ್ಮಪ್ಪನ (ಶ್ರೀವೆಂಕಟರಮಣನ) ವರಪ್ರಸಾದದಿಂದ ಹುಟ್ಟಿದ ಕಾರಣವೇ ಈ ಹೆಸರಿಟ್ಟರೆಂದು ನಾವೇಕೆ ಬೇರೆ ಹೇಳಬೇಕು? ಆತನನ್ನೇ ನಮ್ಮ ಚರಿತ್ರನಾಯಕನಾದ ಕನಕನೆಂದು ಮಾತ್ರ ಒಮ್ಮೆ ಹೇಳಿ ಬಿಡೋಣ ಅಂದರಾಯಿತು.

ವಾಚಕರೇ! ಬೀರಪ್ಪನ ದೈವತ ಭಕುತಿಯನ್ನು ನೋಡಿದಿರಾ! ಆತನ ಭಾವನೆಗೆ ಸರಿಯಾಗಿ ದೇವರು ಎಂತಹ ಫಲವನ್ನು ಕೊಟ್ಟನು? ದೇವಾಧಿದೇವಾ! ನಾರಾಯಣಾ! ಜಗನ್ನಿಯಾಮಕಾ! ಶರಣಾಗತರಕ್ಷಕನೆಂಬ ಬಿರುದು ನಿನ್ನಲ್ಲಿಯೇ ಸಾರ್ಥಕವಾದುದು.

ಇನ್ನು ತಿಮ್ಮನು ಕನಕನೆಂತಾದನೆಂಬದನ್ನು ಕೇಳುವದಕ್ಕೆ ನಿಮ್ಮ ಮನಸ್ಸು ಈಗ ಹಾತೊರೆಯುತ್ತಿರಬಹುದಲ್ಲವೇ? ಹಾಗಾದರೆ ಕೇಳಿರಿ.

'ಬೆಳೆಯು ಪೈರು ಮೊಳೆಯಲ್ಲಿಯೇ ತಿಳಿಯುವದೆಂಬ' ನಾಣ್ಣುಡಿಯು ಸುಳ್ಳಲ್ಲ. ತಿಮ್ಮನು ಚಿಕ್ಕವನಿರುವಾಗಲೇ ಉಳಿದ ಹುಡುಗರಂತೆ ವಿದ್ಯಾಭ್ಯಾಸವನ್ನು ಮಾಡದೆ ಏಕಾಂತದಲ್ಲಿ ಕುಳಿತು ದೇವರನ್ನು ಧ್ಯಾನಿಸುತ್ತಿದ್ದನು. ಕೂತಲ್ಲಿ ನಿಂತಲ್ಲಿ ದೇವರ ಭಜನೆಯು. ಆಟ-ಪಾಟಗಳಲ್ಲಿ ಸಹ ದೇವರ ಮೂರ್ತಿಗಳೇ. ಅದರ ಹೊರತು ಮತ್ತೊಂದಿಲ್ಲ. ಭಕ್ತಶಿರೋಮಣಿಯಾದ ಚಂದ್ರಹಾಸನು ಬಾಲಕನಾಗಿದ್ದಾಗ ಸಾಲಿಗ್ರಾಮವನ್ನು ತಕ್ಕೊಂಡು ಅದರಿಂದಲೇ ಗೋಲಿಯಾಟವನ್ನಾಡಿ ಅದನ್ನು

ಬಾಯಲ್ಲಿಟ್ಟುಕೊಂಡಿರುತ್ತಿದ್ದನಂತೆ. ಈತನೂ ಹಾಗೆಯೇ. ಈಗ ತಿಮ್ಮನು ಆರೇಳು ವರ್ಷದವನಾಗಿರುವನು. ತಂದೆ-ತಾಯಿಗಳಂತೂ ಬಾಲಕನ ಲೀಲೆಗಳನ್ನು ನೋಡಿ ನೋಡಿ ಹಿರಿಹಿರಿ ಹಿಗ್ಗುತ್ತಿದ್ದರು. ಅವರಿಗೆ ಇದೊಂದು ಅಮೌಲ್ಯವಾದ ರತ್ನ; ತೇಜಃಪುಂಜವಾದ ಮೌಕ್ತಿಕ. ಮೂರು ಲೋಕದ ಸಾರ ಸರ್ವಸ್ವವೂ ಇದೇ ಆಗಿತ್ತು. ಆದರೆ—'ವ್ಯಸನಂ ಕೈರ್ನಸಂಪ್ರಾಪ್ತಂ ಕಸ್ಯಸೌಖ್ಯಂ ನಿರಂತರಂ' ಎಂಬಂತೆ ಎಂದೂ ವ್ಯಸನವು ಪ್ರಾಪ್ತವಾಗದೆ ನಿರಂತರ ಸೌಖ್ಯವನ್ನೇ ಅನುಭವಿಸುವದು ಯಾವನ ಹಣೆಯಲ್ಲಿ ಬರೆಯಲ್ಪಟ್ಟಿರುವದು? ಬೆಳ್ದಿಂಗಳ ಹಿಂದೆ ಕತ್ತಲೆ ಇದ್ದಂತೆ ಸುಖದ ಹಿಂದೆ ದುಃಖವು ಇದ್ದೇ ಇರುವದು. ಅದರಂತೆಯೇ ಬೀರಪ್ಪನು ಮುಂದೆ ತುಸ ದಿವಸದಲ್ಲಿ ದೈವಗತಿಯಿಂದ ಮರಣಹೊಂದಲು ಸುಖಸಾಗರದಲ್ಲಿ ತೇಲಾಡುವ ಆತನ ಹೆಂಡರು-ಮಕ್ಕಳು ಒಮ್ಮಿಂದೊಮ್ಮೆ ದುಃಖಸಾಗರದಲ್ಲಿ ಮುಳುಗಿ ಹೋದರು. ಸಂಸಾರದ ಸ್ಥಿತಿಯೇ ಹೀಗೆ. ಅದು ಕ್ಷಣಮಾತ್ರದಲ್ಲಿ ಅಳುವವರನ್ನು ನಗಿಸುವದು. ನಗುವವರನ್ನು ಅಳಿಸುವದು ಆದ್ದರಿಂದಲೇ ಜ್ಞಾನಿಗಳು ಇದಕ್ಕೆ ಮಾಯಾಪ್ರಪಂಚವೆಂದು ತಿಳಿದಿರುವರು. ಇರಲಿ.

ಅತ್ತ ಬೀರಪ್ಪನ ಮನೆಯಲ್ಲಿ ಆತನ ಹೆಂಡತಿ ಬಚ್ಚಿಯೊಬ್ಬಳು. ಇದೊಂದು ಮಗು. ಹೊರತು ಮತ್ತೊಬ್ಬರಿಲ್ಲ. ಆಗ ತಾನೆ ಬಚ್ಚಿಯು ಏನು ಮಾಡಬೇಕು? ಎಲ್ಲಿಗೆ ಹೋಗಬೇಕು? ಎಷ್ಟೋ ಹಲುಬಿದಳು, ಹಂಬಲಿಸಿದಳು; ಭೂಮಿಯಲ್ಲಿ ಬಿದ್ದು ಹೊರಳಿದಳು. ಸಮಾಧಾನವಿಲ್ಲ ದುಃಖವು ಇನ್ನೂ ಹೆಚ್ಚಿತು. ಮನದಣಿಯಾಗಿ ಅತ್ತುಬಿಟ್ಟಳು. ಬದಿಯಲ್ಲಿದ್ದ ಮಗವು ಇನ್ನೂ ಸಣ್ಣದು. ಅದಕ್ಕೆ ಒಂದು ತಿಳಿದರೆ ಒಂದು ತಿಳಿಯದು ತಾಯಿಯನ್ನು ನೋಡಿ ತಿಮ್ಮನೂ ಅಳಹತ್ತಿದನು. ಯಾರಿಗೆ ಯಾರು ಸಮಾಧಾನ ಹೇಳಬೇಕು? ಕಡೆಗೆ ನೆರೆಹೊರೆಯವರೇ ಹಾಗೂ ಹೀಗೂ ಇವರನ್ನು ಸಂತೈಸಿ ಬೀರಪ್ಪನ ದಹನಕಾರ್ಯಗಳನ್ನು ಮುಗಿಸಿದರು. ಬಚ್ಚಿಯ ತಲೆಯ ಮೇಲೆ ಆಕಾಶವೇ ಕಡಕೊಂಡು ಬಿದ್ದಂತಾಯಿತು. ತಿಮ್ಮನಿಗೆ ಇದು ತಿಳಿಯದು. ಪಾಪ! ಸಣ್ಣಹುಡುಗ ಲೋಕದಲ್ಲಿ ಹೇಳುವರಲ್ಲವೇ? ತಾಯಿ ಬೇಕು. ಇಲ್ಲವೆ ಬಾಯಿಬೇಕು. ಅಥವಾ ಸಾಯಬೇಕು ಎಂದು; ತಿಮ್ಮನಿಗೆ ದೈವಸ್ವರೂಪಳಾದ ತಾಯಿಯೊಬ್ಬಳು ಇದ್ದದರಿಂದ ಆತನಿಗೆ ಯಾವ ದುಃಖವೂ ಇಲ್ಲ. ಬೇಕಾದ ಹಾಗೆ ಆಡುತ್ತಾನೆ; ಕುಣಿಯುತ್ತಾನೆ. ತಾಯಿಯೂ ಬರಬರುತ್ತ ಮಗನ ಲೀಲೆಯಲ್ಲಿ ಹಿಂದಿನ ದುಃಖವನ್ನು ಮರೆಯ ಹತ್ತಿದಳು ಎಂತಹ ಪ್ರಬಲ ದುಃಖವಾದರೂ ಎಷ್ಟುಕಾಲ ತಾನೇ ನಿಂತೀತು? ಇಷ್ಟಬಂಧುಗಳಾದವರು ಈ

ತಾಯಿ-ಮಕ್ಕಳಿಗೆ ಆಗಾಗ್ಗೆ ನೆಂವಾಗುತ್ತಿದ್ದರು. ತಿಮ್ಮನು ಬೆಳೆಯು ಹತ್ತಿ ಆಗಲೇ ತುಸ ದೊಡ್ಡವನಾದನು. ಬಚ್ಚಿಗೆ ಯೋಚನೆಯಾಯಿತು. ಇನ್ನುಮೇಲೆ ತನ್ನ ಮಗನು ಸುಮ್ಮನೆ ಉಂಡು-ತಿಂದು ಪುಂಡ ಗಾರನಾಗುವದು ಒಳ್ಳೆಯದಲ್ಲವೆಂದು ನೆನಸಿದಳು. ಆದರೆ ಮಾಡ ವದೇನು? ದೈವಾನುಕೂಲವೊಂದಿರಬೇಕಲ್ಲವೇ? ಅದು ಈಕೆಯ ವಿರುದ್ಧವಾಗಿ ನಿಂತಿತ್ತು. ಚಿಕ್ಕಂದಿನಲ್ಲಿಯೇ ಚೊಕ್ಕದಾದ ವಿದ್ಯೆಗಲಿಸಿ ತಕ್ಕವನನ್ನಾಗಿ ಮಾಡಬೇಕೆಂದರೆ ಈಗಿನಂತೆ ಆ ಕಾಲದಲ್ಲಿ ಊರೂರಿಗೆ ಪಾಠಶಾಲೆ ಗಳೆಲ್ಲಿ? ಸಾಲಿಯೆಂದರೆ ಕಿರ ಕಸಾಲಿ ಇಲ್ಲವೆ ಮಸಾಲಿ. ಮೇಲಾಗಿ ತಿಮ್ಮನಿಗೆ ಕಲಿಯುವ ಲಕ್ಷ್ಯ ಬಹಳ ಹತ್ತುದಿನ ತಲೆ ತುರುಸಿಕೊಂಡರೂ ಹತ್ತಕ್ಷರಗಳು ಬಾರವು. ಇಂಥ ಸ್ಥಿತಿಯಲ್ಲಿ ಆತನು ಅಕ್ಷರ ಶತ್ರುವಾದದ್ದೊಂದು ಆಶ್ಚರ್ಯ ವಲ್ಲ. ತಿಮ್ಮನು ದೊಡ್ಡವನಾದಂತೆ ಬೇಟೆಯಾಡುವದೂ ಕಾಳಗ ಮಾಡುವದೂ ಆತನಿಗೆ ಪ್ರೀತಿಯ ವಿಷಯಗಳಾಗಿ ತೋರಹತ್ತಿದವು, ಇಂಥವನು ಮುಂದೆ ಕನಕ ದಾಸನೆಂಬ ಹೆಸರಿನಿಂದ ಹೇಗೆ ಪ್ರಸಿದ್ಧನಾದನೆಂದು ನೀವೀಗ ಯೋಚಿಸುತ್ತಿರ ಬಹುದ ಲ್ಲವೇ? ಭಗವಂತನ ಲೀಲೆಯನ್ನು ಯಾರು ತಾನೇ ತಿಳಿಯುವರು? ಆರಂಭದಲ್ಲಿ ಗೊಂಬೆಯನ್ನು ಕುಣಿಸುತ್ತಿದ್ದ ಶೀನಪ್ಪನು ಶ್ರೀನಿವಾಸದಾಸನೆನಿಸಿಕೊಂಡದ್ದೂ, ಒಂದು ಖೊಟ್ಟಿ ದುಡ್ಡಿಗೂ ಪ್ರಾಣಬಿಡುತ್ತಿದ್ದಂಥ ಶ್ರೀನಿವಾಸ ನಾಯಕನು ಒಮ್ಮಿಂದೊಮ್ಮೆ ಸರ್ವಸ್ವವನ್ನೂ ಸೂರೆ ಮಾಡಿ ಪುರಂದರ ದಾಸನೆನಿಸಿಕೊಂಡದ್ದೂ ಆತನ ಲೀಲಾ ಮಾತ್ರದಿಂದಲೇ ಅಲ್ಲವೇ? ಅಹಾ! ಭಗವನ್ಮಾಯೆಯನ್ನು ತಿಳಿಯಲು ನಾವೆಷ್ಟರವರು? ನಮ್ಮಂತಹ ಮಂದಮತಿಗಳಿಗೋಸ್ಕರವೇ ದೇವರು ಆಗಾಗ್ಗ ಇಂಥ ಸತ್ಪುರುಷರನ್ನು ನಿರ್ಮಿಸುತ್ತಿರಬಹುದೋ ಏನೋ ಯಾರಿಗೆ ಗೊತ್ತು? ಅಯ್ಯನವರ ಶಾಲೆಯಲ್ಲಿ ಕುಳಿತು ಹಲಿಗೆಯ ಮೇಲೆ ಅಕ್ಷರಗಳನ್ನು ತೀಡುವ ವಿದ್ಯೆಯು ಆತನಿಗೆ ಬೇಕಾಗಿರಲಿಲ್ಲ. ಒಬ್ಬ ಕನ್ನಡ ಕವಿಯು ಹೇಳುವಂತೆ—

> ಹುಟ್ಟಿದರೆ ಸಾವಿಲ್ಲದಿಹ ಬಲು | ಒಟ್ಟಿಯನು ಸಾಧಿಸಲುಬೇಕದು |
> ನೆಟ್ಟನೆಳವಡದಿರ್ದಡೀತನು ಬಿದ್ದ ಬಳಿಕಿನಲೀ ॥
> ಹುಟ್ಟದಿಹ ವಿದ್ಯೆಯನು ಕಲಿವುದು | ಸೃಷ್ಟಿಯೊಳಗುತ್ತಮವು ಹೊಟ್ಟೆ
> ಗೆ | ಕಷ್ಟಪಡುವೀ ವಿದ್ಯೆಗಳ ಕಲಿತೇನು ಫಲವೆಂದಾ ॥
>
> (ಅನುಭವಾಮೃತ)

ಇಂಥ ವಿದ್ಯಾಸಂಪಾದನದಲ್ಲಿಯೇ ಆತನ ಮನಸ್ಸು ಪೂರ್ವಜನ್ಮದ ಸಂಸ್ಕಾರ ಬಲದಿಂದ ಮೆಲ್ಲ ಮೆಲ್ಲನೆ ಹೋಗಹೊಡಗಿತ್ತೆಂಸು ಹೇಳಬಹುದು ಇರಲಿ.

ತಿಮ್ಮನು ಹದಿನೈದು ವರ್ಷದವನಾದನು. ಸತ್ಯಸಂಕಲ್ಪನಾದ ದೇವರ ಅಗಾಧ ಮಹಿಮೆಯಿಂದ ಆಗ ಈತನಿಗೆ ಒಮ್ಮೆಲೆ ಏಳು ನಿಕ್ಷೇಪಗಳು ದೊರೆತವು. ಕೈಯಿಟ್ಟ ಕಡೆಯಲ್ಲಿ ಕನಕ(ಭಂಗಾರ) ದೊರೆಯಹತ್ತಿತು. ಅದರಿಂದ ಜನರು ಆಶ್ಚರಿಪಟ್ಟವರಾಗಿ ತಿಮ್ಮನೆಂಬ ಹೆಸರನ್ನು ಬಿಟ್ಟು ಕನಕಪ್ಪನೆಂದು ಕರೆಯಹತ್ತಿದರು. ಇನ್ನು ಕೆಲವರು ಈತನ ಕಥೆಯನ್ನು ಹೀಗೆ ಹೇಳುತ್ತಿರುವರು.

೧ ಹುಡುಗನಿದ್ದಾಗ ಇವನು ಒಲಿಷ್ಠನಾದ ಶಿಪಾಯಿಯಾಗಿದ್ದು ತನ್ನ ಸೇನಾಪತಿಯ ಮನೆಯ ಬಾಗಿಲ ಕಾಯುತ್ತಿದ್ದನು. ಆಗ ದೇವರು ಒಬ್ಬ ಭಿಕ್ಷುಕನ ವೇಷವನ್ನು ಧರಿಸಿ ಬಂದು ದಾರಿಯನ್ನು ಬಿಡು ಎಂದನು. ಅದಕ್ಕೆ ಶಿಪಾಯಿಯು ದಾರಿಯನ್ನು ಬಿಡಲಿಲ್ಲ. ಭಿಕ್ಷುಕನು ಹಟದಿಂದ ಒಳನುಗ್ಗಲು ಪ್ರಯತ್ನಿಸಿದನು. ಶಿಪಾಯಿಯು ಸುಮ್ಮನಿರಲಿಲ್ಲ ಕೈಯೊಳಗಿನ ಕೋಲಿನಿಂದ ಒಂದು ಬಲವಾದ ಏಟು ಕೊಟ್ಟನು ಭಿಕ್ಷುಕನಿಗೆ ಏಕಶ್ಶಾದ ಕೋಪವುಂಟಾಯಿತು ಶಿಪಾಯಿಯನ್ನು ಮೂರ್ಛಿತನಾಗಿ ಬೀಳುವಂತೆ ಒದೆದು ಈಗೇನು ಮಾಡುವೆ? ಒಳಗೆ ನುಗ್ಗುವೆನು ಎಂದು ಹೇಳಿದನು ಶಿಪಾಯಿಯು ಏಳಲಿಕ್ಕಾಗದಂತಿದ್ದರೂ ಕೈಕಾಲುಗಳನ್ನು ಬಾಗಿಲಿಗೆ ಅಡ್ಡವಾಗಿಟ್ಟು ಈ ದೇಹದಲ್ಲಿ ಪ್ರಾಣವಿರುವವರೆಗೂ ಒಳಗೆ ಬಿಡಲಾರೆನೆಂದನು. ಅಷ್ಟೊಂದು ವಿಶ್ವಾಸ, ಸ್ವಾಮಿನಿಷ್ಠೆ. ಇದನ್ನು ನೋಡಿ ಭಿಕ್ಷುಕನು—ಇಷ್ಟು ಭಕ್ತಿ-ವಿಶ್ವಾಸಗಳನ್ನು ದೇವರಲ್ಲಿಡಬಾರದೇ ಎಂದನು. ಆಗ ಶಿಪಾಯಿಯ ಮನಸ್ಸಿನಲ್ಲಿ ಜ್ಞಾನ ಹುಟ್ಟಿತು. ದೇವರನ್ನು ಮನಸ್ಸಿನಿಂದ ಚಿಂತಿಸಿದನು. ಧ್ಯಾನದಲ್ಲಿ ಭಿಕ್ಷುಕನನ್ನೇ ಕಂಡಂತಾಯಿತು. ಕಣ್ಣು ತೆರೆದು ನೋಡಲು ಭಿಕ್ಷುಕನಿಲ್ಲ. ದೇವರು ನಿಜಸ್ವರೂಪವನ್ನು ತೋರಿಸಿ ಈತನ ಮೈಮೇಲೆ ಕೈಯಾಡಿಸಿದನು. ತತ್ಕ್ಷಣವೇ ಶಿಪಾಯಿಯು ಕಷ್ಟಗಳೆಲ್ಲ ನಷ್ಟವಾಗಿ ಹೋದವು. ದೇಹವು ಸುವರ್ಣಮಯವಾಯಿತು, ಪರಮಾತ್ಮನೇ ಪ್ರತ್ಯಕ್ಷನಾದ ಮೇಲೆ ಏನಾದೀತು ಏನಾಗಲಿಕ್ಕಿಲ್ಲ? ಆದರೆ ಈ ದೇಹವು ಶಿಪಾಯಿಯ ಮನಸ್ಸಿಗೆ ಬರಲಿಲ್ಲ; ದೇವಾ! ಶರೀರವು ಬಂಗಾರಮಯವಾಗಿದ್ದರೆ ತೊಂದರೆಯುಂಟಾಗಬಹುದು ಎಂದು ಬೇಡಿಕೊಂಡನು. ಅದಕ್ಕೆ ದೇವರು—'ಪರರಿಗೆ ಕನಕಮಯವಾಗಿ ತೋರದಿರಲಿ' ಎಂದು ವರವನ್ನು ಕೊಟ್ಟು ಅಂತರ್ಧಾನನಾದನು. ಮುಂದೆ ಶಿಪಾಯಿಯು ವೈರಾಗ್ಯತಾಳಿ ದಾಸನಾದನು ದೇಹವು ಕನಕಮಯವಾದ್ದರಿಂದ ಕನಕನೆಂಬ ಹೆಸರುಂಟಾಯಿತು.

೨ ಮಕ್ಕಳು ಮಕ್ಕಳೆಂದು ಹಲುಬಿ ಹಂಬಲಿಸುವವರು ಬಹು ದಿವಸಕ್ಕೆ ಮಕ್ಕಳನ್ನು ಪಡೆದರೆ ವಿಶೇಷವಾದ ಅಕ್ಕರೆಯನ್ನು ತೋರಿಸುವರಲ್ಲವೇ? ಓ! ಎನ್ನ ಕಂದಾ! ಎನ್ನ ಚಿನ್ನ! ಎನ್ನ ಬಂಗಾರದ ಅರಗಿಳಿಯೇ ಎಂದು ಮುದ್ದಿಸುವರಲ್ಲವೇ? ಹಾಗೆಯೇ ಬಚ್ಚಿಯು ಬಹು ದಿವಸದ ಮೇಲೆ ಈತನೊಬ್ಬನನ್ನೇ ಮಗನನ್ನು ಹಡೆದ ಕಾರಣ ಇದು ನನ್ನ ಚಿನ್ನವೆಂದು ಪ್ರೀತಿಯಿಂದ ಕನಕನೆಂಬ ಹೆಸರಿಟ್ಟಳು.

ಇದು ಹೇಗೇ ಇರಲಿ; ನಾವು ಇನ್ನುಮೇಲೆ ತಿಮ್ಮನಿಗೆ ಕನಕಪ್ಪನೆಂದು ಕರೆದುಬಿಡೋಣ, ಅಂದರಾಯಿತು.

ಇನ್ನು ಈತನ ಪೂರ್ವವೃತ್ತದ ವಿಷಯವಾಗಿ ತಿಳಿದು ಬಂದದ್ದನ್ನು ತುಸ ಹೇಳುತ್ತೇವೆ.

ಬಂದಾನೊಂದು ದಿವಸ 'ಅಣಿಮಾಂಡವ್ಯನೆ'ಂಬ ಋಷಿಯು ತಪಸ್ಸನ್ನು ಮಾಡುತ್ತ ಕುಳಿತಿರಲಾಗಿ ಸೂರ್ಯಸುತನಾದ ಯಮಧರ್ಮನು ಆತನ ಮೇಲೆ ತನ್ನ ಪಾಶವನ್ನು ಬೀಸಿದನು. ಆಗಲಾ ಋಷಿಯು ಕಣ್ಣು ತೆರೆದು ಇದೇನೆಂದು ಕೇಳಲು, ನೀನು ಹುಡುಗನಾಗಿದ್ದಾಗ ಪುಟ್ಟದೊಂದು ಹುಳವನ್ನು (ನೊಣವನ್ನು) ತಟ್ಟನೆ ಕೊಂದೆಯಾದಕಾರಣ ಈಗ ಮೃತ್ಯು ಬಂದೊದಗಿತೆಂದು ಯಮನುಸುರಿದನು. ಮೊದಲೇ ಮುನಿಗಳಿಗೆ ಮುನಿಸು ಮೂಗಿನ ಮೇಲಲ್ಲವೇ? ಇಷ್ಟಾಗಿ ಅಣಿಮಾಂಡವ್ಯನೇನು ಸಾಮಾನ್ಯನಾಗಿರಲಿಲ್ಲ! ಮಹಾತಪಸ್ವಿಯು, ಧರ್ಮಾಧರ್ಮಗಳನ್ನು ಒಳಿತಾಗಿ ಬಲ್ಲವನು; ಕೂಡಲೆ ಧರ್ಮಸೂಕ್ಷ್ಮವನ್ನು ವಿಚಾರಿಸಿ ಕೋಪದಿಂದ:—ಎಲೋ, ನರಕಾಧಿಪಾ! ಚಿಕ್ಕಂದಿನಲ್ಲಿ ಚಕ್ಕಂದವಾಡುತ್ತ ತಿಳಿಯದೆ ಮಾಡಿದ ಅಕೃತ್ಯವನ್ನು ಪಾಪವೆಂದೆಣಿಸಲಾಗದೆಂದು ಶಾಸ್ತ್ರಗಳು ಸಾರುತ್ತಿದ್ದರೂ, ಮೈಮೇಲೆ ಎಚ್ಚರವಿಲ್ಲದೆ ಎನ್ನ ಹರಣವನ್ನು ಹರಣಮಾಡಲಿಕ್ಕೆ ಬಂದಿರುವಿ. ಈ ಪಾಪದ ದೆಶೆಯಿಂದ ಶಾಪ ಪಡುವದು ಸಹಜವಾದದ್ದು - ನೀನು ಎರಡು ಜನ್ಮದಲ್ಲಿ ಶೂದ್ರನಾಗಿ ಭೂಲೋಕದಲ್ಲಿ ಜನಿಸು; ಎಂಬದಾಗಿ ಶಾಪವನ್ನು ಕೊಟ್ಟುಬಿಟ್ಟನು. ಆಗ ಯಮನು ಉಪಾಯಾಂತರವನ್ನು ಕಾಣದೆ ಮೊದಲನೇ ಜನ್ಮದಲ್ಲಿ ವಿದುರ † ನಾಗಿಯೂ, ಎರಡನೇ ಜನ್ಮದಲ್ಲಿ ಕನಕನಾಗಿಯೂ ಹುಟ್ಟಿದನಂತೆ ನೋಡಿರಿ!

---

† ಯಮನು ವಿದುರನಾಗಿ ಹುಟ್ಟಿದನೆಂಬಂಶವನ್ನು ಶ್ರೀಮದಾಚಾರ್ಯರವರು ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಹೀಗೆ ಹೇಳಿರುವರು.

ತಸ್ಯಾಂ ಸದೇವೋ ಜನಿಧರ್ಮರಾಜೋ ಮಾಂಡವ್ಯಶಾಪಾದ್ಯುವಾಹ ಶೂದ್ರತಾಮ್ ||
ವಸಿಷ್ಠಸಾಮ್ಯಂ ಸಮಭೀಪ್ಸಮಾನಂ ಪ್ರಚ್ಯಾವಯಂ ನಿಚ್ಛಯಾಶಾಪಮಾಪ ||೧||

ಅತ್ಯಂತ ಧರ್ಮಸೂಕ್ಷ್ಮವನ್ನು ಬಲ್ಲಂಥ ಯಮಧರ್ಮನಿಗೆ ಕೂಡಾ ಬುದ್ಧಿಯು ಕುಗ್ಗಿತು; ಸಾಹಸವು ತಗ್ಗಿತು, ಕಳೆಯೆಲ್ಲ ಕುಗ್ಗಿತು. ಇದೇನು ಆತನ ಹೆಮ್ಮೆಯಿಂದುಂಟಾಯಿತೆನ್ನುವಿರೋ ಅಥವಾ ಈಶಸಂಕಲ್ಪವೇ ಹೀಗಿತ್ತೆಂದು ಹೇಳುವಿರೋ? ಹೇಗಾದರೂ ಆಗಲಿ; ವಿನಾಶಕಾಲಕ್ಕೆ ವಿಪರೀತ ಬುದ್ಧಿಯುಂಟಾಗುತ್ತದೆಂಬ ನಾಣ್ಣುಡಿಯು ಸುಳ್ಳಲ್ಲ. ದೇವತೆಗಳಾಗಲಿ, ಋಷಿಗಳಾಗಲಿ ಈ ಕಲಿಯುಗದಲ್ಲಿ ಭೂಮಿಯಮೇಲೆ ನಿಜರೂಪದಿಂದ ಸಂಚರಿಸಿ, ಜನರಿಗೆ ಜ್ಞಾನೋಪದೇಶ ಮಾಡಲು ಪರಮಾತ್ಮನ ಅಪ್ಪಣೆಯಿಲ್ಲ. ಆದ್ದರಿಂದ ಈ ವಿಧವಾಗಿ ಜನಿಸಿ ಪ್ರಪಂಚದ ಮಾಯಾವರಣದಲ್ಲಿ ಸಿಕ್ಕು ಮೋಹಿತರಾಗಿ ಮುಂದೆ ಭಗವಂತನ ದರ್ಶನದಿಂದ ಮದನ್ನು ಕಳೆದುಕೊಂಡು ಜ್ಞಾನೋಪದೇಶ ಮಾಡಹತ್ತುತ್ತಾರೆ. ಈ ಮಾತು ಭಗವದ್ಭಕ್ತರ ಚರಿತ್ರಗಳನ್ನು ನಿರೀಕ್ಷಿಸಿದರೆ ವ್ಯಕ್ತವಾಗದೆ ಇರಲಾರದು.

ಹಿಂದಕ್ಕೆ ನಾರದರು—" ನಿನ್ನ ಕೂಡ ಅತ್ಯಂತ ವಿನೋದವಾಡಬೇಕೆಂದು " ವಿಜ್ಞಾಪನ್ನು ಕೇಳಿಕೊಳ್ಳಲು, ಕಲಿಯುಗದಲ್ಲಿ ನಿನ್ನ ಬಯಕೆಯನ್ನು ನೆರವೇರಿಸುವೆನೆಂದು ಸ್ವಾಮಿಯು ವಚನ ಕೊಟ್ಟನು ಆದರಂತೆ ನಾರದರು ಪುರಂದರದಾಸರಾಗಿ

---

ಅಯೋಗ್ಯ ಸಂಪ್ರಾಪ್ತಿಕೃತಪ್ರಯತ್ನ ದೋಷಾತ್ಸಮಾರೋಪಿತವೇವಶೂಲೇ ||
ಚೋರೈರ್ಹೃತೇರ್ಘಪಿತುಚೋರ ಬುಧ್ಯಾಮುಕ್ತೇವಧಾದಿತ್ಯವದದ್ಯಮುಸ್ತವರ್ ||೨||
ನಾಸತ್ಯತಾತಸ್ಯಚ ತತ್ರಹೇತುತಃಶಾಪಂಗೃಹೀತುಂ ಸತಥ್ಯವ ಚೋಕ್ತ್ವಾ ||
ಅವಾಪಶೂದ್ರತ್ವಮುದಾಸ್ಯನಾಮುಚಕ್ರೇಕೃಷ್ಣಃ ಸರ್ವವಿತ್ವಂತಥಾದಾತ್ ||೩||
ವಿದ್ಯಾರತೇವಿದುರೋನಾಮುಜಾಯಂ ಭವಿಷ್ಯತಿಜ್ಞಾನಬಲೋಪಪನ್ನಃ ||
ಮಹಾಧನುರ್ಬಾಹುಬಲಾಧಿಕಶ್ಚ ಸುನೀತಿ ಮಾನಿತ್ಯವದತ್ ಸಕೃಷ್ಣಃ ||೪||

---

ಗರುಡಪುರಾಣ ಬ್ರಹ್ಮಕಾಂಡದಲ್ಲಿಯೂ ಈ ವಿಷಯವನ್ನು ಹೇಳಿದೆ.

ಮಾಂಡವ್ಯಶಾಪಾತ್ಸಯಮೋ ಬಭೂವ ವಿದ್ಯಾರತತ್ವಾದ್ವಿದುರೋನಾಮುಚಾಸೀತ್ ||

| | ಅಧ್ಯಾಯ | ಶ್ಲೋಕ |
|---|---|---|
| ಇದು ಅಲ್ಲದೆ—ಕನಕದಾಸರು ಸ್ವತಃ ತಾವೇ ತಮ್ಮದೊಂದು | ೩೧ | ೬೧ |

ಉಗಾಭೋಗದಲ್ಲಿ [ಹಾಡಿನಲ್ಲಿ] ಈ ವಿಷಯವನ್ನು ಸ್ಪಷ್ಟ ಮಾಡಿದ್ದಾರೆ.

" ... ... ... ... .... ... ...

ಯಮನು ಮುನ್ನಿಮಾಂಡವ್ಯಶಾಪದಿಂದೆರಡು ಜನ್ಮಶೂದ್ರಯೋನಿಯೊಳಗೆ ಪುಟ್ಟಿದನು- ಒಂದು ಜನ್ಮ ವಿದುರನಾಗಿ ಕುರುಬರ ಕುಲದಲ್ಲಿ ಜನಿಸಿದೆ ಎನಗೆ ಈ ಜನ್ಮದಲ್ಲಿ ಮುಕ್ತಿಯೆಂತೆಂಬೆ| ....||

ಇದೇ ಉಗಾಭೋಗದಲ್ಲಿ—ಶ್ರೀ ವ್ಯಾಸರಿಗೆ ೩ ಜನ್ಮಗಳೆಂದೂ ಶ್ರೀಪುರಂದರದಾಸರಿಗೆ ಎರಡು ಜನ್ಮಗಳೆಂದೂ ಈ ಪುರಂದರದಾಸರ ನಾಲ್ಕುಜನ ಮಕ್ಕಳು ಇಂತಹ ಅಂಶದವರೆಂದೂ ಹೇಳಿರುವರು.

ಹುಟ್ಟಿ, ಪ್ರಪಂಚದಲ್ಲಿ ಮಾಯಾಮೋಹಿತರಾಗಿರಲು ಅದೇ ಸ್ವಾಮಿಯು ಬ್ರಾಹ್ಮಣ ರೂಪದಿಂದ ಬಂದು ಜ್ಞಾನೋದಯವಾಗುವಂತೆ ಮಾಡಿದನೆಂಬ ಕಥೆಯು ಆ ದಾಸರ ಚರಿತ್ರೆಯಲ್ಲಿ ವಿಸ್ತಾರವಾಗಿ ಬರುವದು ಕನಕದಾಸನ ವಿಷಯವಾದರೂ ಹೀಗೆಯೇ.

ಈ ಪ್ರಕಾರ ಭೂಮಿಯಲ್ಲಿ ಅವತರಿಸಿದ ಕನಕನು ಬಾಡದಲ್ಲಿ ಬೆಳೆಯುತ್ತಿರಲು, ಒಂದುದಿನ ಆತನ ಸ್ವಪ್ನದಲ್ಲಿ ಶ್ರೀ ಆದಿಕೇಶವ ಮೂರ್ತಿಯು ಬಂದು, "ನನ್ನನ್ನು ಇಲ್ಲಿಂದ ಕಾಗಿನೆಲ್ಲಿಗೆ ಕರೆದುಕೊಂಡು ಹೋಗು" ಎಂದು ಅಪ್ಪಣೆ ಮಾಡಿದಹಾಗೆ ಬೋಧೆಯಾಯಿತು. (ಮೊದಲು ಆದಿಕೇಶವ ದೇವಸ್ಥಾನವು ಬಾಡದಲ್ಲಿತ್ತು) ಆಗ ಕನಕನು ತನ್ನ ತಾಯೊಡಗೊಂಡು ಕಾಗಿನೆಲ್ಲಿಗೆ ಹೊರಟನು, ಹಾಗು ಶ್ರೀ ಕೇಶವಮೂರ್ತಿಯನ್ನು ಬಾಡದಿಂದ ಒಯ್ದು ಅಲ್ಲಿ ಸ್ಥಾಪನೆ ಮಾಡಿದನು. ಹಿಂದಕ್ಕೊಮ್ಮೆ ವಸುದೇವನು ತನ್ನ ಮಗನನ್ನು—ಅಲ್ಲ! ಅಲ್ಲ!! ಮೂರು ಲೋಕದ ಸ್ವಾಮಿಯನ್ನು ಮಧುರೆಯಿಂದ ಗೋಕುಲಕ್ಕೆ ಇದೇ ರೀತಿ ಕೊಂಡೊಯ್ದನೆಂದು ಓದಿದ್ದೆವು. ಅದೇ ಸ್ವಾಮಿಯನ್ನೀಗ ನಮ್ಮ ಕನಕಪ್ಪನು ಬಾಡದಿಂದ ಕಾಗಿನೆಲ್ಲಿಗೆ ಕರಕೊಂಡು ಬಂದನು. ಅಹಹಾ! ಈತನಿನ್ನೆಷ್ಟು ಪುಣ್ಯವಂತನೋ? ತ್ರಿವಿಕ್ರಮಾವತಾರದಿಂದ ಮೂರು ಲೋಕಗಳನ್ನು ತನ್ನ ಎರಡು ಪಾದಗಳಿಂದಲೇ ಅಳೆದ ಭಗವಂತನು, ಮಂದರ ಪರ್ವತವನ್ನೇ ಹೆಗಲ ಮೇಲೆ ಹೊತ್ತುಕೊಂಡು ನಿಂತಂಥ ಸ್ವಾಮಿಯು ಕನಕಪ್ಪನ ಪುಟ್ಟವೆಂಡು ಕೈಯಲ್ಲಿ ತೊಟ್ಟಿಲೊಳಗೆ ಮಲಗಿದಂತೆ ಮಲಗಿಕೊಂಡು ಬಂದನೆಂದಮೇಲೆ ಈತನ ಪವಿತ್ರತೆಯನ್ನು ಬೇರೆ ಹೇಳಬೇಕೆ? ಅದೆಲ್ಲವೂ ವಾಚಕವೃಂದಕ್ಕೆ ಮುಂದೆ ಕ್ರಮಕ್ರಮವಾಗಿ ತಾನೇ ಅನುಭವಕ್ಕೆ ಬರುವದು.

ಕನಕನಿಗೀಗ ಹದಿನಾರುವರ್ಷದ ಪ್ರಾಯ. ಗುರು-ಹಿರಿಯರನ್ನು ಸೇವಿಸುತ್ತ ಭಾವಶುದ್ಧಿಯಿಂದಿದ್ದನು ತಂದೆಯಂತೆ ಮಗನೆಂದು ಜನರು ಆಡಿಕೊಂಡರು. ಅಷ್ಟರಲ್ಲಿ ಶ್ರೀಭಗವದನುಗ್ರಹದಿಂದ ಈತನಿಗೆ ಬಂಕಾಪುರದ ಅಧಿಕಾರವು ದೊರೆಯಿತು. ಲಕ್ಷ್ಮಿಬಾಯಿಯ ಸಾನ್ನಿಧ್ಯವೊಂದಿದ್ದ ಮೇಲೆ ಯಾತಕ್ಕೇನು ಕೊರತೆ? ಬಂಧುಬಳಗದವರು ಬಹುಸಡಗರದಿಂದ ಈತನ ಮದುವೆ ಮಾಡಿದರು ಬಗಳೇ ಕನಕನೆಂಬ ಹೆಸರು ಹೋಗಿ ಕನಕನಾಯಕದೊರೆಯೆಂಬ ಪ್ರಖ್ಯಾತ ಹೆಸರುಂಟಾಯಿತು. ಇದೇ ಕಾಲದಲ್ಲಿ ಕನಕದೊರೆಯು ಕಾಗಿನೆಲ್ಲಯಲ್ಲಿ ಶ್ರೀಆದಿಕೇಶವ ದೇವರಿಗೆ ದೊಡ್ಡದಾದ ಒಂದು ಗುಡಿಯನ್ನು ಕಟ್ಟಿಸಿ ಉತ್ಸವಾದಿಗಳನ್ನು ಮಾಡಿಸುತ್ತ

ಬಂದನು. ಇಷ್ಟರಲ್ಲಿ ಈ ಭಾಗದ ತಿರುಪತಿಯ ಒಕ್ಕಲುಗಳಿಗೆಲ್ಲ ಒಂದು ವಿಚಿತ್ರವಾದ ಸ್ವಪ್ನವಾಯಿತು. 'ನನಗೆ ಕೊಡುವ ಮುಡುಪು ಮೊದಲಾದವುಗಳನ್ನು ಕನಕನಿಗೆ ಅರ್ಪಿಸಿ ಬಿಟ್ಟರೆ ನಾನು ಸಂತೋಷಿಸುವೆನೆಂದು.' ಅಹಾ! ಕನಕನ ಮೇಲೆ ಸ್ವಾಮಿಯ ಅಂತಃಕರಣವು ಇನ್ನೆಷ್ಟೋ! ಆ ಜನರಿಗೀಗ ಕನಕನೇ ತಿರುಪತಿಯ ವೆಂಕಪ್ಪನ ಉತ್ಸವಮೂರ್ತಿಯೆಂಬಷ್ಟು ಪೂಜ್ಯಬುದ್ಧಿಯುಂಟಾಗಿ ಹೋಯಿತು. ಕಪ್ಪಗಾಣಿಕೆಗಳನ್ನು ಕನಕನಿಗೇ ಅರ್ಪಿಸಹತ್ತಿದರು. ಆದರೆ ಕನಕನು ಮಾತ್ರ ಇದರಿಂದ ಹಿಗ್ಗಲಿಲ್ಲ; ಮದೋನ್ಮತ್ತನಾಗಲಿಲ್ಲ; ತುಸವಾದರೂ ಅಹಂಕಾರವನ್ನು ತಾಳಲಿಲ್ಲ. ಎಲ್ಲವೂ ಸ್ವಾಮಿಯ ಆಟವೆಂದೇ ಅವನ ತಿಳವಳಿಕೆ. ಸುಭಾಷಿತಕಾರರಾದರೋ—

ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕತಾ ||
ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಂ ||

ಅಂದರೆ—ಯೌವನ, ದ್ರವ್ಯ, ಅಧಿಕಾರ, ಅವಿವೇಕತೆ ಈ ನಾಲ್ಕರಲ್ಲಿ ಮನುಷ್ಯನಿಗೆ ಒಂದೊಂದರ ಬಲವಿದ್ದರೇನೇ ಅನೇಕ ಅನರ್ಥಗಳುಂಟಾಗುತ್ತವೆಂದು ಕೂಗಿಕೊಳ್ಳುತ್ತಿರುವರು. ಕನಕನಲ್ಲಿ ಇವುಗಳಲ್ಲಿ ಮೂರು ಒತ್ತಟ್ಟಿಗೆ ಸೇರಿಕೊಂಡಿವೆ. ಆದಾಗ್ಯೂ ಅಂತಹ ಅನರ್ಥಗಳಿಗೆ ಅಣುಮಾತ್ರವೂ ಕಾರಣನಾಗಲಿಲ್ಲವೆಂದ ಮೇಲೆ ಆತನೊಬ್ಬ ಸಾಧುಸಂತನೆಂದು ಯಾರು ತಾನೇ ಹೊಗಳಲಿಕ್ಕಿಲ್ಲ! ಯಾರು ಕೊಂಡಾಡಲಿಕ್ಕಿಲ್ಲ! ಇದೇ ಸತ್ಪುರುಷರಿಗೂ-ನಮಗೂ ಇರುವ ಹೆಚ್ಚುಕಡಿಮೆ.

ಬರಬರುತ್ತ ಅವನಿಗೆ ಅಧಿಕಾರವು ಸರಿದೋರಲಿಲ್ಲ. ಯಾರು ಅಧಿಕಾರ ಬಂದಾಗ ದೇವರನ್ನೂ ಕಣ್ಣೆತ್ತಿ ನೋಡದೆ, ಗುರು-ಹಿರಿಯರನ್ನು ಸನ್ಮಾನಿಸದೆ, ಜನರ ಗೋಣು ಮುರಿದಾದರೂ ದುಡ್ಡು ಗಳಿಸಬೇಕೆಂದಿರುವರೋ—ಯಾರು ಬಡಬಗ್ಗರನ್ನೂ ಸಜ್ಜನರನ್ನೂ ಪೀಡಿಸುವದೇ ತಮ್ಮ ಅಧಿಕಾರಕ್ಕೆ ಗೌರವವೆಂದು ತಿಳಿದಿರುವರೋ, ಮತ್ತೆ ಯಾರು ಅಧಿಕಾರಬಂದ ಕೂಡಲೆ ತನ್ನ ದೇಶ, ತನ್ನ ಭಾಷೆ, ತನ್ನ ಜನರು ಎಂಬದನ್ನೇ ಮರೆತು ಸ್ವಾರ್ಥಕ್ಕೆ ಬಡಿದಾಡುತ್ತಿರುವರೋ ಅಂಥವರು ಮಾತ್ರ ಅಧಿಕಾರ ಲೋಲುಪರಾಗಿರಬಹುದು ಕನಕನಿಗೆ ಇವೆಲ್ಲವೂ ತೀರ ವಿರುದ್ಧವಾಗಿದ್ದವು. ಆತನಿಗೆ ದೇವರಲ್ಲಿ ನಿಸ್ಸೀಮವಾದ ಭಕ್ತಿ, ಗುರು-ಹಿರಿಯರಲ್ಲಿ ಅತ್ಯಂತ ಪೂಜ್ಯಭಾವ, ಲಂಚಗುಳಿಯಾಗಿ ದುಡ್ಡುಗಳಿಸುವದಂತೂ ಮಹತ್ಪಾಪವೆಂಬ ತಿಳುವಳಿಕೆ, ಬಡಬಗ್ಗರನ್ನು ಪೀಡಿಸುವದು ಇವನ ಸ್ವಭಾವವೇ ಅಲ್ಲ. ತನ್ನ ದೇಶ, ತನ್ನ ಜನರೆಂದರೆ ಸಂಪೂರ್ಣ ಅಭಿಮಾನ. ಇಂಥವನಿಗೆ ಅಧಿಕಾರವು ಹೇಗೆ

ಸರಿಬಂದೀತು? ಬರಲಿಲ್ಲ. ಇದೇ ಹೊತ್ತಿಗೆ ಆನೆಗೊಂದಿಯ ಮಹಾರಾಜನಿಂದ ಒಂದು ಪತ್ರವು ಬಂದಿತು. ಅದರಲ್ಲಿ ಹೀಗೆ ಬರೆಯಲ್ಪಟ್ಟಿತ್ತು. "ನೀನು ದೇವಾಲಯ ಉತ್ಸವಾದಿಗಳಿಗೇ ಬೊಕ್ಕಸದೊಳಗಿನ ಬಂಡಾರವನ್ನೆಲ್ಲ ಒಯಲು ಮಾಡುವಿಯೆಂದು ಕೇಳುತ್ತೇವೆ. ಆದ್ದರಿಂದ ನಮ್ಮ ಬಂಡಾರದ ಲೆಕ್ಕವನ್ನೆಲ್ಲ ನಮಗೆ ಒಪ್ಪಿಸಿ ಅಧಿಕಾರವನ್ನು ಬಿಟ್ಟುಬಿಡಬೇಕು" ಈ ಪತ್ರದಿಂದಂತೂ ಕನಕನಿಗೆ ಮತ್ತಿಷ್ಟು ತಲೆತಿರುಗಿತು. ಚಾಕರಿಯೇ ಜೀವನ ಸರ್ವಸ್ವವೆಂದು ನಂಬಿದ ಈಗಿನ ಕಾಲದ ನಮ್ಮಂಥವರಾಗಿದ್ದರೆ, ಪತ್ರಮುಟ್ಟಿದಾಕ್ಷಣವೇ ಮಹಾರಾಜನಲ್ಲಿಗೆ ಹೋಗಿ, ಆತನ ಕಾಲಮೇಲೆ ಬಿದ್ದು ಹೊರಳಾಡಿ, ಬಾಯಿತೆರೆದು, ಅಂಗಲಾಚಿ ದೀನ ವಾಣಿಯಿಂದ ಎಷ್ಟೆಷ್ಟೋ ಬಿದ್ದುಬೇಡಿಕೊಳ್ಳುತ್ತಿದ್ದೆವು; ಆದರೆ ಕನಕನು ಇಷ್ಟು ೨೦ನೇ ಶತಮಾನದ ಉಚ್ಚಲಕ್ಷಣವನ್ನು ಹೊಂದಿದ ನಾಗರಿಕನಾಗಿದ್ದಿಲ್ಲ; ಅವನಲ್ಲಿ ಇನ್ನೂ ಉಜ್ವಲವಾದ ಸ್ವಾಭಿಮಾನ-ಸ್ವಾತಂತ್ರ್ಯಪ್ರೀತಿಗಳು ತುಂಬಿಕೊಂಡಿದ್ದವು. ಅಂತೇ ಅವನು ಮಹಾರಾಜನನ್ನು ಲಕ್ಷ್ಯಮಾಡದೆ ಒಮ್ಮಿಂದೊಮ್ಮೆ ಕೈಯೊಳಗಿನ ಅಧಿಕಾರವನ್ನು ಬಿಸುಟಿ, ತನ್ನ ತಾಯಿಯೊಡನೆ ಕಾಗಿನೆಲ್ಲಿಗೆ ಬಂದುಬಿಟ್ಟನು. ಈ ಪೂರ್ವದಲ್ಲಿಯೇ ಈತನ ಹೆಂಡತಿಯು ತೀರಿಕೊಂಡಿದ್ದಳು. ಆದರೂ ಕನಕನು ತನ್ನ ಮೊದಲಿನ ಪ್ರೀತಿಯ ಉದ್ಯೋಗವನ್ನು (ಬೇಟೆಯಾಡುವದು, ಕಾಳಗ ಮಾಡುವದು) ಮಾತ್ರ ಬಿಟ್ಟಿರಲಿಲ್ಲ.

ಕಾಗಿನೆಲ್ಲಿಗೆ ಬಂದನೆಂದು ಕೇಳಿದಮಾತ್ರಕ್ಕೆ ನೀವು ಆತನನ್ನು ದೇವರ ದಾಸನಾಗಿದ್ದಾನೆಂದು ಭಾವಿಸಿರಬಹುದು. ಇಲ್ಲ ಇಲ್ಲ, ಹಾಗಾಗಲಿಲ್ಲ. ದಾಸನಾಗುವದಕ್ಕೆ ಬೇಕಾದ ವೈರಾಗ್ಯದ ಅಂಕುರವೇ ಆತನಲ್ಲಿ ಇನ್ನೂ ಉತ್ಪನ್ನವಾಗಿರಲಿಲ್ಲ. ದಾಸನಾಗುವ ಕಾಲವು ತುಸ ದೂರವಿತ್ತು. ಆತನು ತನ್ನ ಉದ್ಯೋಗದಲ್ಲಿ ಆಸಕ್ತನಾಗಿ ಕಾಲಕಳೆಯುಹತ್ತಿದನು. ದೇವರೆನ್ನಲಿಲ್ಲ, ದಿಂಡರೆನ್ನಲಿಲ್ಲ; ಯಾವುದಕ್ಕಾದರೂ ಯೋಗವು ಬರಬೇಕು. ಮುಂದೆ ಒಂದು ದಿವಸ ಆತನಿಗೆ ಚಮತ್ಕಾರವಾದದ್ದೊಂದು ಸ್ವಪ್ನವು ಬಿತ್ತು. ಅದರಲ್ಲಿ ಭಗವಾನ್ ಶ್ರೀಕೃಷ್ಣನು ಬಂದು—'ಎಲೋ ಕನಕಾ, ಕೈಯಲ್ಲೇನು ಶುನಕಾ, ಮಾಡುವಿಯೇನು ಮುರಕಾ, ಸೇರುವಿಯಲ್ಲೊ ನರಕಾ, ಎನಗಾಗಿದೆ ಮರುಕಾ, ದಾಸನೆನಿಸೊ ತಿರುಕಾ' ಎಂನು ಹೇಳಿದ ಹಾಗಾಯಿತು. ಕನಕಪ್ಪನು ಕಣ್ದೆರೆದು ನೋಡುತ್ತಾನೆ, ಕತ್ತಲೆ ಮನೆಯು, ಬೆಳಗಾದಮೇಲೆ ತನಗೆ ಬಿದ್ದ ಸ್ವಪ್ನದ ವಿಷಯವನ್ನು ಯೋಚಿಸಿಕೊಂಡು—ಅಹಾ! ಯಾವನೋ ನನಗೆ ಚನ್ನಾಗಿ ಬೋಧಿಸಿದನು. ಮುರುಕ ದಂಡಿಗೆಯನ್ನು ಹಿಡಿದು

ತಿಲಕನಾಗಿರಬೇಕಂತೆ. ಈ ಶೂರನು ಧೀರತನದಿಂದ ವೈರಿಗಳಕೂಡ ಖಾಡಾಖಾಡ ಯುದ್ಧಮಾಡುವದನ್ನು ಬಿಟ್ಟು, ದೇಶತಿರುಗುವ ದಾಸನಾದಾನೇ? ನಾನೆಂದಿಗೂ ಆತನ ಬೋಧನೆಗೆ ಕಿವಿಗೊಡಲಾರೆನು, ಎಂದು ನಿರ್ಧರಿಸಿದನು ನೀಚಕೆಲಸಕ್ಕೆ ಎಳೆದವನ ಮನಸ್ಸು ಉಚ್ಚ ಕೆಲಸಕ್ಕೆ ಒಲಿಯುವದುಂಟೇ? ಮೆಚ್ಚಿದವರಿಗೆ ಮರಣವೇ ಸುಖವೆಂಬಂತೆ ಕನಕನು ತನ್ನ ಕಾಯಕವನ್ನು ಬಿಡಲಿಲ್ಲ

ಪರಮಾತ್ಮನ ಲೀಲೆಯನ್ನು ಯಾರು ತಾನೇ ತಿಳಿಯುವರು? ಕೆಲವು ದಿವಸಗಳು ಕಳೆದವು. ಇಷ್ಟರಲ್ಲಿ ಬಾಡದವರಿಗೂ-ನೆರೆಹಳ್ಳಿಯವರಿಗೂ ಸೀಮಾಂತರದ ವಿಷಯವಾಗಿ ವ್ಯಾಜ್ಯಹುಟ್ಟಿತು. ಜನ್ಮಭೂಮಿಯೆಂದರೆ ಎಂಥವರಿಗಾದರೂ ಅಭಿಮಾನವಲ್ಲವೇ? ಕನಕನೂ ಬಾಡದ ವಿಷಯದಲ್ಲಿ ಅಂಥ ಅಭಿಮಾನವನ್ನು ತಾಳಿದನು. ಈತನು ಪರಾಕ್ರಮಿಯಾದ್ದರಿಂದ ಆ ಅಭಿಮಾನವು ಮತ್ತಷ್ಟು ಜಾಗ್ರತವಾಗಿತ್ತು. ಬರುತ-ಬರುತ ಚಿಕ್ಕದಾದ ವ್ಯಾಜ್ಯವು ಘೋರ ಬಡದಾಡಕ್ಕಿಟ್ಟಿತು. ಆಗ ಕನಕನು ನೆರೆಹಳ್ಳಿಯವರೊಡನೆ ಬಡದಾಟಕ್ಕೆ ಹೋಗಿ ಒಬ್ಬ ಕಾದುತೆಯ ರಾವುತನಿಂದ ಮೈಮೇಲೆ ಹೊಡತ ತಿಂದು ಬಂದನು. ಮುಂದೆ ಆತನಿಗೆ ಚಳಿಜ್ವರಗಳು ಬರಹತ್ತಿದವು; ಬಹಳ ಹೈರಾಣಾದನು ಹೀಗೆ ಬೇನೆಯಿಂದ ಮಲಗಿರಲು, ಮತ್ತೊಮ್ಮೆ ಮೊದಲಿನಂತೆಯೇ ಕನಕನಿಗೊಂದು ಕನಸುಬಿತ್ತು ಆಗ ಶ್ರೀಕೃಷ್ಣನು—ಎಲೋ ಕನಕಾ, ನಿನ್ನಿನ ರಾವುತನು ಯಾರೆಂಬುದನ್ನು ತಿಳಿದೆಯೋ? ಇನ್ನಾದರೂ ದಾಸನಾಗಿ, ದಂಡಿಗೆಯನ್ನು ಹಿಡಿದು, ನನ್ನ ನಾಮಸ್ಮರಣೆಮಾಡಲಿಕ್ಕೆ ಒಡಂಬಡು. ಅಂದರೆ ನಿನ್ನ ಗಾಯಗಳೆಲ್ಲ ಈಗಲೇ ಮಾಯುವವು, ಎಂದು ಹೇಳಿದನು. ಕನಕನು ಮಾತಾಡಲಿಕ್ಕೆ ತ್ರಾಣವಿಲ್ಲದೆ, ನಾಲಿಗೆಯನ್ನು ತೋರಿ ಸನ್ನೆಮಾಡಿದನು. ದೇವರು ಆತನ ನಾಲಿಗೆಯ ಮೇಲೆ ಬೀಜಾಕ್ಷರವನ್ನು ಬರೆದುಬಿಟ್ಟನು. ಕನಕನಿಗಾಗ ಕಣ್ಣುತೆರೆದವು. ಮೊದಲಿನ ಅಹಂಕಾರವೆಲ್ಲ ಹೋಯಿತು. ಜ್ಞಾನೋದಯಕಾಲಬಂತು ಕನಸಿನಲ್ಲಿಯೇ ಒಪ್ಪಿಕೊಂಡುಬಿಟ್ಟನು ಎಚ್ಚತ್ತುನೋಡುತ್ತಾನೆ, ಮೈಮೇಲೆ ಒಂದಾದರೂ ಗಾಯವಿಲ್ಲ ಶರೀರದಲ್ಲಿ ಯಾವತರದ ನೋವೂ ಇಲ್ಲ ಆಗ ಅವನಿಗೆ ಅತ್ಯಂತ ಆಶ್ಚರ್ಯವಾಯಿತು; ತನ್ನ ಜನ್ಮವು ದಾಸನಾಗುವದಕ್ಕೇ ಎಂಬ ತಿಳುವಳಿಕೆಯುಂಟಾಯಿತು. ತಾಯಿಯನ್ನು ಕೇಳಿದನು—ಅಮ್ಮಾ, ನನ್ನ ಕನಸಿನಲ್ಲಿ ಶ್ರೀ ಆದಿಕೇಶವಮೂರ್ತಿಯು ಬಂದು, ದಾಸನಾಗೆಂದು ಹೇಳಿದಂತಾಯಿತು. ಅದಕ್ಕೆ ಒಪ್ಪಿಕೊಳ್ಳಲು ನನ್ನ ಬೇನೆಯೆಲ್ಲ ಬಯಲಾಗಿರುವದು ನೋಡು. ಇದಕ್ಕೆ ಏನಾದರೂ ಕಾರಣವಿದೇಯೇ, ಎಂದನು. ಆಗ ಬಚ್ಚಿಯು ಮಗನನ್ನು

ಮುದ್ದಿಸಿ—ಮಗೂ, ಬಹುಕಾಲ ಸಂತಾನವಿಲ್ಲದ್ದರಿಂದ ಮಗನು ಹುಟ್ಟಿದರೆ ನಿನಗೆ ದಾಸನನ್ನಾಗಿ ಮಾಡುವೆನು, ಎಂದು ನಾನು ಆದಿಕೇಶವಮೂರ್ತಿಗೆ ಹರಕೆಯನ್ನು ಹೊತ್ತುಕೊಂಡಿದ್ದೆನು; ಆದರೆ ನಿನ್ನ ಮೇಲಿನ ಮೋಹದಿಂದ ಹರಕೆಯನ್ನು ನಡಿಸುವದು ನನ್ನಿಂದಾಗಲಿಲ್ಲ; ಎಂದಳು. ಆಗಲಾ ಕನಕನು ತಾಯಿಗೆ ನಮಸ್ಕಾರ ಮಾಡಿ; ಸಂಸಾರದಲ್ಲಿ ವಿರಕ್ತಿಯನ್ನು ಹೊಂದಿ, ದೇವರ ದಾಸನಾಗುವೆನೆಂದು ಹೇಳಿಕೊಂಡನು.

ಬಾಯಿಯಿಂದ ಹೇಳಿಕೊಂಡ ಮಾತ್ರಕ್ಕೆ ಆಗಲಿಲ್ಲ. ದಾಸನಾಗ ಮದು ಬಲು ಕಠಿಣ ಅದಕ್ಕೆ ಮುಖ್ಯವಾಗಿ ದೇವರಲ್ಲಿ ದಟ್ಟಿತವಾದ ಭಕ್ತಿಯುತ್ಪನ್ನವಾಗಬೇಕು; ಷಡ್ರಿಪುಗಳನ್ನು ಗೆಲ್ಲಬೇಕು, ನಾನು-ನನ್ನದೆಂಬ ಮಮಕಾರವನ್ನೂ ಸ್ವಾರ್ಥವನ್ನೂ ಓಡಿಸಬೇಕು ಸರ್ವಭೂತದಯಾಪರನಾಗಬೇಕು, ಏವಮಾದಿ ಗುಣಗಣಗಳುಳ್ಳವರೇ ದಾಸರಾಗಲಿಕ್ಕೆ ಯೋಗ್ಯರು. ಅದೆಲ್ಲವನ್ನೂ ಬಿಟ್ಟು, ದೇವರಲ್ಲಿ ನಿಜವಾದ ಭಕ್ತಿಯಿಲ್ಲದೆ, ವೈರಾಗ್ಯದ ಅಂಕುರವೂ ತೋರದೆ, ಹೊಟ್ಟೆಯೊಳಗೆ ನೂರೆಂಟು ದುರಾಲೋಚನೆಗಳನ್ನು ತುಂಬಿಕೊಂಡು, ಸ್ವಾರ್ಥವನ್ನೇ ಬಯಸಿ ಬಯಸಿ ಒಳಲುತ್ತಿರುವ ನಮ್ಮಂಥ ಪಾಮರರು ದಾಸರಾಗುವೆವೆಂದು ಹೇಳಿಕೊಂಡರೆ, ಅದೊಂದು ನಗೆಗೇಡಲ್ಲವೇ? ಇಂಥವರ ವಿಷಯದಲ್ಲಿ ಲೋಕಸ್ವಭಾವವನ್ನು ಸಂಪೂರ್ಣವಾಗಿ ಅರಿತ ಶ್ರೀಮದಾಚಾರ್ಯರ ಶಿಷ್ಯರಾದ ಶ್ರೀ ನರಹರಿ ತೀರ್ಥಸ್ವಾಮಿಗಳವರು ಬಹು ಸುಂದರವಾಗಿ ಬಣ್ಣಿಸಿದ್ದಾರೆ —

ರಾಗ—ಆನಂದಭೈರವಿ, ಅಟತಾಳ

ಮಾತಿನಲ್ಲಿ ಹರಿದಾಸತನ | ನೀತಿಯಲ್ಲಿ ಬಲು ಪ್ರೌಢತನ ||
ಪ್ರೀತಿಧನ ದುರ್ವಿಷಯದಲಿ ನಿ | ರ್ಭೀತಿ ದೈವ ಗುರುದ್ರೋಹದಲಿ ||೧||
ಏಕಾಂತದಲಿ ಧನದಗೋಷ್ಠಿ | ಲೋಕಾಂತದಲಿ ವೈರಾಗ್ಯದಗೋಷ್ಠಿ ||
ಶ್ರೀಕಾಂತನ ಸೇವೆಗೆ ಅಮಾನ | ಭೂಕಾಂತನ ಸೇವೆಗೆ ಸನ್ಮಾನ ||೨||

ಲೋಕದಲ್ಲಿ ಈ ತರದ ಬಾಹ್ಯಾಡಂಬರದ ಬಡಾಯಿಯ ಜನಗಳೇ ಬಹಳ; ಆದರೆ ನಮ್ಮ ಕನಕಪ್ಪನು ಇಂಥ ಜನರ ಮಾಲೆಯಲ್ಲಿ ಸೇರಿದವನಲ್ಲ ದೇವತಾಂಶನಾದ ಇವನು, ಇಷ್ಟು ದಿವಸ ಮಾಯಾಮೋಹದಿಂದ ಮುಚ್ಚಲ್ಪಟ್ಟದ್ದರಿಂದ,ಬೂದಿಯೊಳಗಿನ ಕೆಂಡದಂತೆ ಅಪ್ರಕಾಶಿತವಾಗಿದ್ದನೇ ಹೊರತು, ಯಾವಾಗ ಸ್ವಾಮಿಯ ದರ್ಶನವಾಗಿ ಮಾಯಾಮೋಹವೆಂಬ ಕಗ್ಗತ್ತಲೆಯು ಹರಿದು ಹೋಯಿತೋ ಆಗಲೇ ನಿಗಿನಿಗಿ ಕೆಂಡದಂತೆ ಪ್ರಕಾಶಿತನಾದನು. ನವಕೋಟಿನಾರಾಯಣರೆನಿಸಿಕೊಂಡರೂ

ಒಂದು ಬೊಟ್ಟಿದುಡ್ಡಿಗೆ ಜೀವಕಳೆಕೊಳ್ಳುವಷ್ಟು ಲೋಭಿಗಳಾದ ಶ್ರೀನಿವಾಸ ನಾಯಕರು, ಒಂದೇ ಒಂದುಸಾರೆ ಆದ ಪರಮಾತ್ಮನ ದರ್ಶನಮಾತ್ರದಿಂದ ಸರ್ವಸ್ವವನ್ನೂ ದಾನಮಾಡಿ ದಾಸರಾಗಿಬಿಡಲಿಲ್ಲವೇ? ಸತ್ಪುರುಷರ ಮಾತೆಲ್ಲವೂ ಹೀಗೆಯೇ.

ಕನಕಪ್ಪನು ದಾಸನಾದ ಕೂಡಲೆ ದೇವರನ್ನು ಮನದಣಿಯಾಗಿ ಸ್ತುತಿಸಿದನು. * ದೇವಬಲವಿದ್ದವನಿಗೆ ಯಾವ ಬಲಬೇಕು? ಜಗದೀಶನ ಮಹಿಮೆಯಿಂದ ಕೂಡಲೆ ಕನಕನಿಗೆ ದಿವ್ಯಜ್ಞಾನೋದಯವಾಯಿತು. ಸಕಲ ಶಾಸ್ತ್ರಾಗಮಗಳೂ ಕರತಲಾಮಲಕವಾದವು. ಈಗ ಕನಕನಿಗೆ ದಾಸನಾದೆನೆಂಬ ಸಂತೋಷ. ಅಪಾರವಾದ ಸಂತೋಷ; ಇಂತಹ ಸಂತೋಷವನ್ನು ದೇವರ ಗುರುತೇ ಇಲ್ಲದ ನಾವು ಹೇಗೆ ತಿಳಿದೇವು? ಕನಕನು ತಡಮಾಡಲಿಲ್ಲ ತಟ್ಟನೆ ಹೋಗಿ ಶ್ರೀ ವೈಷ್ಣವರಾದ ತಾತಾಚಾರ್ಯರೆಂಬ ಪಂಡಿತವರ್ಯರಿಂದ ಅಂಕಿತವನ್ನು ತೆಗೆದುಕೊಂಡು ದಾಸನಾಗಿ ಪದಗಳನ್ನು ಮಾಡುತ್ತ ಸಂಚರಿಸಹತ್ತಿದನು. †

---

* ರಾಗ ಮುಖಾರಿ, ತಾಳ ಝಂಪಾ.

ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು | ಪದುಮನಾಭನಪಾದದೊಲಿಮೆ ಎನಗಾಯಿತು || ಪ || ಹರಿತೀರ್ಥಪ್ರಸಾದ ಜಿಹ್ವೆಗೆ ದೊರಕಿತು | ಹರಿಯ ನಾಮಾಮೃತವು ಕಿವಿಗೊದಗಿತು || ಹರಿದಾಸರು ಎನ್ನ ಬಂಧುಗಳಾದರು | ಹರಿಯ ಶ್ರೀಮುದ್ರೆ ಎನಗಾಭರಣವಾಯ್ತು ||೧|| ಮುಕ್ತರಾದರು ಎನ್ನನೂರೊಂದು ಕುಲದವರು | ಮುಕ್ತಿಮಾರ್ಗಕೆ ಯೋಗ್ಯನಾನಾದೆನೊ || ಅಕಳಂಕ ಶ್ರೀಹರಿ ಭಕುತಿಗೆ ಮನಬಿಳಿದು | ರುಕ್ಮಿಣಿಯರಸ ಕೈವಶನಾದ ನೆನಗೆ || ೨ || ಇಂದೆನ್ನ ಜೀವಕ್ಕೆ ಸಕಲಸಂಪದವಾಯ್ತು | ಮುಂದೆನ್ನ ಜನ್ಮಸಾಫಲ್ಯವಾಯ್ತು || ತಂದೆ ಶ್ರೀ ಕಾಗಿನೆಲೆಯಾದಿಕೇಶವರಾಯ | ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತಾ || ೩ ||

† ರಾಗ ಮೋಹನ, ತಾಳ ಝಂಪಾ.

ನೀನುಪೇಕ್ಷೆಯಮಾಡೆ ಬೇರೆಗತಿಯಾರೆನಗೆ | ನಿಗಮಗೋಚರ ಮುಕುಂದಾ || ಗಾನರಸ ವಿಲೋಲ ಆಗಮ ಸುಶೀಲ | ಭಕ್ತಜನ ಪರಿಪಾಲ ಬಾಲಗೋಪಾಲ || ಪ || ಜಪತಪಾನುಷ್ಠಾನ ಜಪಿಸಿ ನಿನ್ನನೆನೆಯುವಡೆ ಜಾಣತನ ಯೆನ್ನೊಳಿಲ್ಲಾ | ಗುಪಿತದಲಿ ದಾನಧರ್ಮವ ಮಾಳ್ಪೆನೆಂಬುದಕೆ ಘನವಾದ ಧನವು ಇಲ್ಲ || ಅಪರಮಿತ ಕರ್ಮಗಳ ಅನುಸರಿಸಿ ನಡೆವುದಕೆ ನಿಪುಣತ್ವ ಮೊದಲೆ ಇಲ್ಲ | ಕೃಪಣ ನಿಪುಣತ್ವ ಜಾಣತ್ವ ಇಲ್ಲದಿಹ ಜಡಕೆ ಸುಪವಿತ್ರನಾಗದಲೆ ಪರಕೆ ಗತಿಯಿಲ್ಲಾ || ೧ || ಆನೆನೆಗಳಿಗೆ ಸಿಲುಕಿ ಆರೆಬಾಯ ಬಿಡುತಲಿರೆ ಮೌನದಲಿ ಬಂದು ಕಾಯ್ದೆ | ಹೇ ನಾರಗನೆಂದು ಕೂಗಿದಾ ಅಜಮಿಳಗೆ ನೀನೊಲಿದು ಕೃಪೆಮಾಡಿದೆ || ಹಾದಿಯಿಲ್ಲದ ಪದವಿ ಧ್ರುವರಾಯನಿಗೆಕೊಟ್ಟು ದೀನತ್ವವನು ಬಿಡಿಸಿದೆ | ದಾನವಾಂತಕ ಸಕಲ ದಿವಿಜರೊಡನೆ ಕೃಷ್ಣನೀ

ಇನ್ನು ಮೇಲೆ ಕನಕಪ್ಪನಿಗೆ ಕನಕದಾಸನೆಂದು ಕರೆಯಲು ಅಡ್ಡಿಯೇನು? ಕನಕಪ್ಪನು ದಾಸನಾಗಿ ಕೈಯಲ್ಲಿ ತಂಬೂರಿಯನ್ನು ಹಿಡಿದನು. ಅವನಾವೊದಲಿನ ಸ್ಥಿತಿಯು ಈಗ ಉಳಿದಿರಲಿಲ್ಲ. ಭಗವಂತನಲ್ಲಿ ಭಕ್ತಿ ಹೆಚ್ಚಿತು. ತೀರ್ಥ-ಕ್ಷೇತ್ರಗಳಿಗೆ ಹೋಗಬೇಕೆಂಬ ಆಶೆ ಹುಟ್ಟಿತು. ತಿರುಪತಿಯ ಶ್ರೀ ವೆಂಕಟರಮಣ ದೇವರೇ ಈತನ ಇಷ್ಟದೈವತವಲ್ಲವೆ? ಅದರಿಂದ ಮೊದಲು ಆತನ ದರ್ಶನ ತಕ್ಕೊಳ್ಳುವದಕ್ಕೆ ಯೋಚಿಸಿ ತಿರುಪತಿಯ ಯಾತ್ರೆಗೆ ಹೊರಟನು ಈ ಕಾಲದಲ್ಲಾದರೋ ಎಲ್ಲೆಲ್ಲಿಯೂ ಪ್ರಬಲವಾಗಿರುವ ಧೂಮಶಕಟ (ಉಗೆಬಂಡಿ) ಪ್ರಭಾವದಿಂದ ತಿಂಗಳುಗಟ್ಟಲೆ ಹೋದರೂ ಕಾಣದಿದ್ದ ತಿರುಪತಿಯು ಒಂದೇ ದಿನದ ದಾರಿಯಾಗಿ ಕಾಣಿತಿರುವದು. ಅದರಿಂದ ಪೂರ್ವದ ಕಷ್ಟನಷ್ಟಗಳನ್ನು ಯೋಚಿಸುವದೂ ನಮ್ಮಿಂದಾಗದು; ಆದರೆ ಕನಕದಾಸನ ಕಾಲದಲ್ಲಿ ಇಂತಹ ಸಾಧನಗಳಾವವೂ ಹುಟ್ಟಿರಲಿಲ್ಲ ಸರಳ ಮಾರ್ಗವೂ ಇರಲಿಲ್ಲ. ಎಲ್ಲಿಗೆ ಬೇಕಾದರೂ ನಡೆದುಕೊಂಡೇ ಹೋಗಬೇಕು. ಎಷ್ಟು ಕಷ್ಟವನ್ನಾದರೂ ಸೋಸಬೇಕು. ಹೀಗಿತ್ತು. ಕನಕದಾಸನು ಇಂತಹ ಕಷ್ಟನಷ್ಟಗಳನ್ನೇನೂ ಲಕ್ಷಿಸಲಿಲ್ಲ. ಯಾರೊಬ್ಬರ ಸಹಾಯವನ್ನೂ ಇಚ್ಛಿಸಲಿಲ್ಲ. ಕಾಲು ನಡೆಯಿಂದ ನಡದೇ ಬಿಟ್ಟನು. ದೇವರೆಂದರೆ ಅಷ್ಟೊಂದು ಭಕ್ತಿ. ಆ ವೇಳೆಯಲ್ಲಿ ಈತನನ್ನು ನಮ್ಮ ವಾಚಕ ಮಹಾಶಯರೊಳಗೆ ಯಾರಾದರೂ ನೋಡಿದ್ದರೆ ನಿಜವಾಗಿಯೂ ನಗೆಯಾಡದೆ ಇರುತ್ತಿದ್ದಿಲ್ಲವೆಂದು ಹೇಳಬಹುದು ಅವನ ಹೊಲಸು ಮೈಯೂ ಹೊಲಸು ಅರಿವೆಗಳೂ ಜನರನ್ನು ಸನಿಮುಕ್ಕೆ ಬರಗೊಡದಂತೆ ಮಾಡಿದ್ದುವು. ಮೈಮೇಲೆಲ್ಲ ನೊಣಗಳು ಮುಕುರಿರತ್ತಿದ್ದುವು. ನೋಡುವವರಿಗೆ ಅಸಹ್ಯವಾಗಿ ಶುದ್ಧ ಜಡನಂತೆ ತೋರುತ್ತಿದ್ದನು. ಇವನೆಲ್ಲಿಯ ಕುರುಬನೆಂದು ಜನರು ಹೀಯಾಳಿಸಿ ನಗುತ್ತಿದ್ದರು. ಹುಡುಗರು ಹುಡುಗಾಟವಾಡುತ್ತಿದ್ದರು. ಆದರೂ ಅವನು ಬಾಯಿಬಿಚ್ಚಿ ಒಂದಾದರೂ ಮಾತನಾಡದೆ ಸುಮ್ಮನೆ ಹಾದೀ ಹಿಡಿದು ನಡೆದಿದ್ದನು. ಯಾವಾತನು ತನ್ನ ಹೃದಯಕಮಲದಲ್ಲಿ ಪರಮಾತ್ಮನನ್ನು ಪೂಜಿಸುತ್ತ ಆತನ ಚರಣಾರವಿಂದದಲ್ಲಿಯೇ ಮನಸ್ಸನ್ನು ಲೀನವಾಗ ಮಾಡಿದ್ದನೋ ಅಂಥವನು ಕ್ಷುದ್ರಮನುಷ್ಯರ ನುಡಿಗಳಿಗೆ ಹೇಗೆ ಕಿವಿಗೊಟ್ಟಾನು? ಕನಕನ ಮನಸ್ಸೆಲ್ಲ ತಿರುಪ

---

ಯನ್ನನು ಸಹಿಸದೆ ಬರಿದೇ || ೨ || ಈ ಕ್ಷಣತ್ರಯದಿ ಬಯಲಾಶೆಯಲಿ ಭ್ರಮೆಗೊಂಡು ಮೋಸ ಹೋದೆನು ನಾನಿಂದು| ಬೇಸರದಿ ಮನನೊಂದು ಮಾಯಕ್ಕೆ ಶಿಲುಕಿ ನಾ ಘಾಸಿಬಡಲಾರೆನೆಂದೂ|| ವಾಸುದೇವನೆ ನಿನ್ನ ಹೊಂದಿ ಬದುಕುವೆನೆಂದು ಆಶೆಬಡುತಿಹೆನು ಇಂದು । ದಾಸನೆಂದೆನಿಸಿ ಡಂಗುರ ಹೊಯಿ ಬಡದಾವಿಕೇಶವನೆ ಕರುಣಿಸಿಂದು ಬಂದು || ೩ ||

ತಿಯ ವೆಂಕಟರಮಣನಲ್ಲಿಯೇ ಯಾವಾಗ್ಗೆ ಹೋದೇನು ಸ್ವಾಮಿಯ ದರ್ಶನವು ಯಾವಾಗ್ಗೆ ಆದೀತು? ಎಂಬುದೇ ಅವನ ಕುತೂಹಲ. ಮತ್ತೊಂದಿಲ್ಲ ಹೀಗೆ ಕೆಲವು ದಿವಸಗಳಲ್ಲಿ ತಿರುಪತಿಗೆ ಹೋಗಿ ಮುಟ್ಟಿದನು. ದೇವರ ದರ್ಶನವಾಯಿತು. ಆಗ ಕನಕನಿಗೆ ಇನ್ನೆಷ್ಟು ಸಂತೋಷವಾಯಿತೋ ಹೇಳಲಸಾಧ್ಯ. ತನ್ನ ಇಷ್ಟದೈವತವೂ—ಭೂವೈಕುಂಠಪತಿಯೂ ಆದ ಶ್ರೀ ವೆಂಕಟರಮಣನನ್ನು ಇಂದು ಕಣ್ಣಾರೆ ಕಂಡೆನಲ್ಲಾ ಎಂಬ ಆನಂದವು ಆತನ ಹೊಟ್ಟೆಯಲ್ಲಿ ಹಿಡಿಸದಾಯಿತು. ಆನಂದದ ಭರದಲ್ಲಿ ದೇವರನ್ನು ನುತಿಸಹತ್ತಿದನು. † ಕುಣಿಯ ಹತ್ತಿದನು.

ಎಷ್ಟು ಹಾಡಿದರೂ, ಕುಣಿದರೂ ಅವನಿಗೆ ತೃಪ್ತಿಯೇ ಇಲ್ಲ ಭಗವಂತನು ಮೊದಲೇ ಭಕ್ತಪ್ರಿಯನಲ್ಲವೇ? ಆತನು ನಮ್ಮ ಕನಕಪ್ಪನ * ಉಚ್ಚಬಕುತಿಗೆ ಮೆಚ್ಚಿ

---

† ರಾಗ—ರೇಗುಪ್ತಿ—ಅಟತಾಳ.

ಇಷ್ಟುದಿನ ಭೂವೈಕುಂಠ | ವೆಷ್ಟುದೂರವೊ ಎನುತಿದ್ದೆ || ದೃಷ್ಟಿಯಿಂದೆ ನೋಡಿದೆ ನಾ | ಸೃಷ್ಟಿಗೀಶನೆ ಶ್ರೀರಂಗಶಾಯಿ || ಪ ||

ವನ ಉಪವನಗಳಿಂದ | ಘನಸರೋವರಗಳಿಂದ || ಕನಕಗೋಪುರಗಳಿಂದ | ಘನಶೋಭಿತನೆ ರಂಗಶಾಯಿ ||೧|| ಎಂಟು ಏರು ಕಳದುದರಿಂದ | ತುಂಟರೈವರ ತುಳಿದುದರಿಂದ || ಕಂಟಕೊಬ್ಬನ ಕೊಲಿಸಿದರಿಂದ | ಒಂಟನಾಗಿ ಬಂದೆನು ರಂಗಶಾಯಿ ||೨|| ವಜ್ರ-ವೈಡೂರ್ಯ ತೊಲೆಗಳ ಕಂಡೆ | ಪ್ರಜ್ವಲಿಪ ಮಹಾದ್ವಾರ ಕಂಡೆ | ದುರ್ಜನಾಂತಕನೆ ರಂಗಶಾಯಿ ||೩|| ರಂಭೆಊರ್ವಸಿ ವ್ಯಾಳವಕಂಡೆ | ತುಂಬರುನಾರದರ ಕಂಡೆ || ಅಂಬುಜೋದ್ಭವರುದ್ರನ ಕಂಡೆ | ಶಂಬರಾರಿಪಿತನೆ ರಂಗಶಾಯಿ ||೪|| ನಾಗಶಯನನ ಮೂರ್ತಿಕಂಡೆ | ಭೋಗಿಭೂಷಣಶಿವನನುಕಂಡೆ| ಭಾಗವತರ ಸಮ್ಮೇಳವ ಕಂಡೆ | ಕಾಗಿನೆಲೆಯಾದಿಕೇಶವ ರಂಗಶಾಯಿ ||೫||

* ಇವರು ವಿಜಯನಗರದ ಅಚ್ಯುತರಾಯ, ಕೃಷ್ಣರಾಯರ ಕಾಲದಲ್ಲಿದ್ದವರು. ಈ ವಿಜಯನಗರದರಾಯರು ಗುರುಗಳನ್ನು ಅಗಲಿರಲಾರದೆ ತಮ್ಮಲ್ಲಿಯೇ ಗೌರವದಿಂದ ಇಟ್ಟುಕೊಂಡಿದ್ದರು. ಒಮ್ಮೆ ಕುಯೋಗವು ಪ್ರಾಪ್ತವಾದಾಗ ಈ ಸ್ವಾಮಿಗಳವರು ರಾಯರ ಪ್ರಾರ್ಥನೆಯಂತೆ ವಿಜಯನಗರದ ಸಿಂಹಾಸನದ ಮೇಲೆ ಕುಳಿತು ಆ ಯೋಗವು ಮುಗಿಯುವ ವರೆಗೂ ಆಳಿದರಂತೆ. ಅಲ್ಲದೆ ತಿರುಪತಿಯಲ್ಲಿ ಶ್ರೀ ವೇಂಕಟೇಶದೇವರಿಗೆ ಹನ್ನೆರಡುವರ್ಷ ಅರ್ಚಕರಾಗಿದ್ದರಂತೆ. ಇವರ ಗುರುಗಳು ಬ್ರಹ್ಮಣ್ಯತೀರ್ಥರು. ವಿದ್ಯಾಗುರುಗಳು ಶ್ರೀಪಾದರಾಯಸ್ವಾಮಿಗಳವರು ದಾಸಕೂಟದ ಮುಖ್ಯಸ್ಥರಾದ ಶ್ರೀಪುರಂದರದಾಸರಿಗೆ ಉಪದೇಶ

ಅಂದೇ ರಾತ್ರಿ ಸ್ವಪ್ನದಲ್ಲಿ ಕಾಣಿಸಿಕೊಂಡು ನೀನಿನ್ನು ವ್ಯಾಸರಾಯರ ಮಠಕ್ಕೆ ಹೋಗಿ ಸೇರು ಎಂದು ಅಪ್ಪಣೆಕೊಟ್ಟನು. 'ಗುರುವಚನಮಲಂಘ್ಯಂ' ಎಂದು ಹೇಳುವದಿಲ್ಲವೇ? ಇದಂತೂ ಜಗದ್ಗುರುವಿನ ವಚನವು. ಹೇಳತಕ್ಕದೇನು? ಆಗಲೇ ಕನಕನು ‡ ಗಿರಿಯನ್ನು ಬಿಟ್ಟು ತೆರಳಿದನು. ಶ್ರೀವ್ಯಾಸರಾಯ ಸ್ವಾಮಿಗಳವರ ಮಠವು ಆಗ್ಗೆ ಸೋಸಲೆಯಲ್ಲಿತ್ತು. ಅಲ್ಲಿಗೇ ಬಂದನು. ಶ್ರೀಗಳವರ ದೇವತಾರ್ಚನೆಯು ನಡೆದಿತ್ತು. ಅದನ್ನರಿತು ಹೊರಗೆ ದೂರದಲ್ಲೊಂದು ಕಡೆಯಲ್ಲಿ ಸುಮ್ಮನೆ ಕುಳಿತುಕೊಂಡನು. ಆದರೆ ಮಠದಲ್ಲಿರುವ ಬ್ರಾಹ್ಮಣರು ಇವನಂತೆ ಸುಮ್ಮನೆ ಕುಳಿತುಕೊಳ್ಳುವರೇ?

'ಕೆಲಸಕ್ಕೆ ಕರೆಯಬೇಡಿರಿ ಊಟಕ್ಕೆ ಮರೆಯಬೇಡಿರಿ' ಎಂದು ಹೇಳುವ ಪ್ರಕಾರದವರು ಕೆಲ ಕೆಲವರು ಇದ್ದೇ ಇದ್ದರು. ಅವರು ಹೊರಗೆ ಹಣಿಕಿ ನೋಡುತ್ತಾರೆ! ಕನಕನು ಕಣ್ಣು ಮುಚ್ಚಿಕೊಂಡು ಕುಳಿತಿದ್ದನು.. ಕೂಡಲೆ ಅಲ್ಲಿಗೆ ಬಂದು ನೀನಾರು ಇಲ್ಲೇಕೆ ಕುಳಿತಿರುವೆ? ಎಂಬದಾಗಿ ಕೇಳಿದರು. ಉತ್ತರವೇ ಇಲ್ಲ. ಮತ್ತೊಮ್ಮೆ ಸಮೀಪಕ್ಕೆ ಹೋಗಿ ಗರ್ಜಿಸಿದರು. ಆಗ ತಾನೇ ಕನಕನು ಕಣ್ಣು ತೆರೆದನು. ಅವನ ಮಾನಸ ಪೂಜೆಯೆಲ್ಲವೂ ಮುಗಿದಿತ್ತು. ನೆರೆದ ಬ್ರಾಹ್ಮಣರನ್ನು ಕುರಿತು—ಸ್ವಾಮಿ ನಾನು ಕುರುಬರವನು † ಕನಕನೆಂದು ಕರೆಯುತ್ತಾರೆ.

---

ಮಾಡಿ ಅಂಕಿತವನ್ನು ಕೊಟ್ಟವರು ಈ ವ್ಯಾಸರಾಯರೇ. ಇವರು ಪ್ರಲ್ಹಾದನ ಅಂಶವೆಂದು ಗೊತ್ತಾಗಿದೆ.

ಇವರ ಕಾಲವು ೧೫೩೯

‡ ಮೈಸೂರಿಂದ ಸುಮಾರು ಹದಿನೆಂಟು ಮೈಲಿನ ಮೇಲೆ ಕಾವೇರಿಯ ಈಚೆಯ ದಡದಲ್ಲಿ ತಿರುಮಕೂಡಲು ಎಂಬ ನಾರಸಿಂಹಕ್ಷೇತ್ರವೂ, ಆಚೆಯ ದಂಡೆಯಲ್ಲಿ ಸೋಸಲೆ ಎಂಬ ಪಟ್ಟಣವೂ ಉಂಟು.

† ರಾಗ—ಮುಖಾರಿ—ಝಂಪೆತಾಳ.

ನಾವು ಕುರುಬರು ನಮ್ಮ ದೇವರೇ ಬೀರಯ್ಯ | ಕಾತ ನಮ್ಮಜ್ಜ ನರ ಕುರಿ ಹಿಂಡುಗಳ || ಪ || ಅಷ್ಟಮದ ಮತ್ಸರಗಳೆಂತೆಂಬ ಟಗರುಗಳು | ದೃಷ್ಟಿಜೀವಾತ್ಮನೆಂತೆಂಬೊ ಆಡು || ಸೃಷ್ಟಿಪ್ರಸಿದ್ಧವೆಂತೆಂಬುವಾ ಹೋತುಗಳು | ಕಟ್ಟಿ ಕೋಲಿನಲಿ ಇರುತಿರುವ ನಮ್ಮಜ್ಜ || ೧ || ವೇದಶಾಸ್ತ್ರ ಪುರಾಣವೆಂತೆಂಬ ಶ್ವಾನಗಳು | ಕಾದಿದ್ದು ನಮ್ಮಜ್ಜ ಹಿಂಡಿನೊಳಗೆ ಹಾದಿ ಕಾಣದೆ ಕೂಗಿ ಬಾಯಾರಿ ಕಾಲ್ಗೆರ

ಶ್ರೀ ಸ್ವಾಮಿಗಳವರ ಚರಣಾನುಗ್ರಹದಿಂದ ಕುರುಬತನವನ್ನು ಹೋಗಲಾಡಿಸಿಕೊಳ್ಳ ಬೇಕೆಂದು ಸನ್ನಿಧಿಗೆ ಬಂದಿದ್ದೇನೆ ಅವರ ದರ್ಶನವನ್ನಿಷ್ಟು ಮಾಡಿಸಬೇಕು. ಹೀಗೆಂದು ಅತಿ ದೀನವಾಣಿಯಿಂದ ಬೇಡಿಕೊಂಡನು. ಕುರುಬನೆಂದ ಕೂಡಲೆ ಬ್ರಾಹ್ಮಣರೆಲ್ಲರೂ ದೂರ ಸರಿದು ನಿಂತರು. ಛೀ ಛೀ ಇದೆಂತಹ ಅನ್ಯಾಯ! ಕುರು ಬನು ಇಲ್ಲಿಗೆ ಬರಬಹುದೇ? ಇವನನ್ನೀಗಲೇ ಇಲ್ಲಿಂದ ಹೊರಡಿಸಿರಿ ಮೇಲಾಗಿ ಇವನಿಗೆ ಸ್ವಾಮಿಗಳ ದರ್ಶನವಾಗಬೇಕಂತೆ ಅಬ್ಬಬ್ಬಾ! ಎಂಬದಾಗಿ ಒದರಾಡ ಹತ್ತಿದರು. ಎಲ್ಲರ ಬಾಯಿಯಲ್ಲಿಯೂ ಇದೇ ಬೇರೆ ಮಾತೇ ಇಲ್ಲ. ಕನಕನಾ ದರೋ ಒಬ್ಬನು. ಬ್ರಾಹ್ಮಣರು ನೂರಾರು ಮಂದಿ ಅವನನ್ನು ಕೇಳುವರಾರು? ಅಷ್ಟರಲ್ಲಿ ಶ್ರೀ ವ್ಯಾಸರಾಯರವರೇ ಈ ಗದ್ದಲವನ್ನು ಕೇಳಿ ದೇವತಾರ್ಚನೆ ಮುಗಿ ಸಿಕೊಂಡು ಹೊರಗೆ ಬಂದರು. ಕನಕನು ಅವರಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ಮೊದಲಿನಂತೆಯೇ ಬೇಡಿಕೊಂಡನು, ಶ್ರೀಗಳವರು ಜ್ಞಾನದೃಷ್ಟಿಯಿಂದ ನೋಡಿ ದರು. ಅವರಿಗೆ ಪರಮ ಸಂತೋಷವಾಯಿತು, ಒಳ್ಳೇದು ನಮ್ಮ ಮಠದಲ್ಲಿಯೇ ವಾಸ ಮಾಡಿಕೊಂಡಿರು ಎಂದು ಪ್ರೀತಿಯಿಂದ ನುಡಿದು ಬಿಟ್ಟರು. ಕನಕನು ಬಾಗಿಲ ಕಾಯುವದೂ ಬಗೆದುಕೊಂಡು ಬರುವದೂ ಇತ್ಯಾದಿ ಅವರ ಸೇವೆಯಲ್ಲಿ ನಿಂತುಕೊಂಡನು. ಅಹಹಾ! ಮಹಾತ್ಮರಲ್ಲಿ ಎಂತಹ ಉದಾತ್ತ ಗುಣವಿರುವದು ನೋಡಿರಿ! ಆದುದರಿಂದಲೇ ಅವರು ದೇವರಿಗೆ ಸಹ ಪ್ರೀತ್ಯಾಸ್ಪದರೆನಿಸುವರು. ಅಜ್ಞಾ ರಾದ ಮಠಿಕರಿಗೆ ಇದು ಹೇಗೆ ತಿಳಿಯಬೇಕು? ಅವರು ಶ್ರೀಗಳವರ ನುಡಿಯನ್ನು ಕೇಳಿ ಗುಣುಟ್ಟ ಹತ್ತಿದರು. ಸ್ವಾಮಿಗಳು ಅದನ್ನು ಲಕ್ಷಿಸಲೇ ಇಲ್ಲ. ಹಾಗೆಯೇ ನಡೆಯಿತು. ಕನಕನು ಕಾಗಿನೆಲ್ಲಿಯಲ್ಲಿರುವ ಶ್ರೀಆದಿಕೇಶವ ಮೂರ್ತಿಯೇ ತನ್ನಿಷ್ಟ ದೈವತವೆಂದು ಬಗೆದು ಪದ ಪದ್ಯಗಳನ್ನು ಮಾಡುತ್ತ ಮಠದ ಸಂಗಡಲೇ ಇರಹತ್ತಿ ದನು. ಆಗ ನಡೆದ ಅನೇಕ ಮಹಾತ್ಮ್ಯಗಳಲ್ಲಿ ಕೆಲವನ್ನು ನಮಗೆ ತಿಳಿದ ಮಟ್ಟಿಗೆ ಎರಡನೇ ಭಾಗದಲ್ಲಿ ವಿವರಿಸುವೆವು.

---

ಗಲು | ಆದರಿಸಿ ಅಂಬಲಿಯ ನೆರೆ। ವ ನಮ್ಮಜ್ಜ || ೨ || ಬರಿಯೆಂಬ ಮರಿಗಳು ಹಿಂಡಿನೊಳಗೆ ಬಂದು | ಮಾರಿ ವ್ಯಾಘ್ರವೆಂತೆಂಬ ತೋಳಹೊಕ್ಕು || ಕುರುಬ ಹಿಂಝಾವದಲಿ ಕುರಿಯ ಮರಿವುದು ಕಂಡು | ಅರಿತು ಏರಿಯದ ಹಾಗೆ ಇರುವ ನಮ್ಮಜ್ಜ || ೩ || ಹುಟ್ಟೊದಕೆ ಮೊದಲಿಲ್ಲ ಸಾವೊದಕೆ ಕೊನೆಯಿಲ್ಲ | ಹುಟ್ಟು ಸಾವಿನ ಹೊಲಬು ಬಲ್ಲ ನಮ್ಮಜ್ಜ || ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿ ಮಾಡಿ ಹೊಟ್ಟೆ ತುಂಬಿದ ಹಾಗೆ ಕರೆವ ನಮ್ಮಜ್ಜ || ೪ || ಕಲಿಯುಗಕೆ ಗೌಡನಿವ ಸಂಗಾ

# ೨ನೆಯ ಭಾಗ.



ಸಿರಿಗೆ ಹಿಗ್ಗದೆ ಬಡತನಕೆ ಜ | ರ್ಝರಿತನಾಗದೆ ಪರರು ಕೀರ್ತಿಸೆ |
ಬೆರತೀದೆ ನಿಂದಿಸಿದವರನುರೆ ಮರಳಿ ನಿಂದಿಸದೆ ||
ಹಿರಿಯರಲಿಗರ್ವಿಸದೆ ತನುವನು | ಪಿರಿದುವಿಶ್ವಾಸಿಸದೆ ಸತ್ಯವ |
ತೊರೆಯದಿಹಸತ್ಪುರುಷನೆನ್ನವನಾತ ಕೇಳೆಂದಾ ||

(ಅಕ್ರೂರ ಚರಿತ್ರ)

ಮಹಾತ್ಮನಾದ ಕನಕದಾಸನ ಮಹಾತ್ಮ್ಯಗಳನ್ನು ನನ್ನಂಥ ಅಲ್ಪಜ್ಞನೂ, ಮಂದಮತಿಯೂ ಬರೆಯಲೆಳಸುವದು ಶಕ್ತಿಗೆ ಮೀರಿದ ಕಾರ್ಯವೆಂದು ತಿಳಿದಿದ್ದರೂ ಇಂಥ ಭಕ್ತಾಗ್ರೇಸರನ ಗುಣಗಳನ್ನು ಕಣರೂಪವಾಗಿಯಾದರೂ ಕೀರ್ತನೆ ಮಾಡಿದರೆ ಎಷ್ಟೋ ಪುಣ್ಯರಾಶಿಯೊದಗುವದೆಂದರಿತು ವಾಚಕರ ಸೌಕರ್ಯಕ್ಕಾಗಿ ಯಥಾಮತಿ ವರ್ಣಿಸಲು ಪ್ರಯತ್ನ ಮಾಡಿರುತ್ತೇನೆ. ನ್ಯೂನತೆಗಳುಂಟೆಂದು ವಾಚಕರು ಕೋಪಿಸಕೂಡದು.



## ೧ನೆಯ ಕಥೆ.



## ಮಾನಸಪೂಜೆ.



ಒಂದಾನೊಂದು ದಿವಸ ಪ್ರಾತಃಕಾಲದ ಏಳುಗಂಟೆಯ ಸಮಯ; ಶ್ರೀಗಳವರು ಸ್ನಾನ-ಸಂಧ್ಯಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಮಾನಸಪೂಜೆಯನ್ನಾರಂಭಿಸಿದ್ದರು. ಇತ್ತ ಹೊರಗೆ ಅದೇವೇಳೆಯಲ್ಲಿ ಕನಕನೂ ಮಾನಸಪೂಜೆಗೆ ಕುಳಿತಿದ್ದನು. ಅತ್ತ ಸ್ವಾಮಿಗಳವರು ತಮ್ಮ ಹೃದಯಕಮಲದಲ್ಲಿ ಪರಮಾತ್ಮನ ದಿವ್ಯಮೂರ್ತಿಯನ್ನು ಸ್ಥಾಪಿಸಿ ಪೂಜೆಮಾಡುತ್ತಿರುವಾಗ ವೈಜಯಂತೀ ಮಾಲೆಯ

---

ತಿ ಮಂತ್ರಿಸುತ | ಕಲಿಯುಗಂಗಳಿನೆಲ್ಲ ಮರೆತನೀತ || ಜಲಜಾಕ್ಷ ಕಾಗಿನೆಲೆಯಾದಿ ಕೇಶವನ ಮನ | ವೊಲಿಸಿ ಭಜಿಸದ ಮನುಜನೆ ಹುಚ್ಚ ಕುರಬಾ || ೫ ||

ನ್ನು ಹೇಗೆ ಹಾಕಬೇಕೆಂದು ಯೋಚಿಸಹತ್ತಿದ್ದರು. ಅಂದರೆ ಮಾಲೆಯು ಪರಮಾತ್ಮನ ಕಿರೀಟದ ಮೇಲಿಂದ ಹಿಡಿಯುವಂತಿದ್ದಿಲ್ಲ. ಅದಕ್ಕಾಗಿಯೇ ಯೋಚನೆ ನಡೆದಿತ್ತು. ಅಷ್ಟರಲ್ಲಿ ಹೊರಗೆ ಕಣ್ಣು ಮುಚ್ಚಿಕೊಂಡು ಕುಳಿತ ಕನಕನು ಏನನ್ನು ನುಡಿಯಬೇಕು! 'ಮಹಾಪ್ರಭೋ! ಸ್ವಾಮಿಯ ಕಿರೀಟವನ್ನು ತೆಗೆದು ಮಾಲೆಯನ್ನು ಹಾಕಬೇಕು. ಯೋಚಿಸುವದೇತಕ್ಕೆ?' ಎಂದು ಕೂಗಿಕೊಳ್ಳಬೇಕೇ? ಈ ನುಡಿಯನ್ನು ಕೇಳಿದ ಕೂಡಲೆ ಶ್ರೀಗಳವರು ಆನಂದಾಬ್ಧಿಯಲ್ಲಿ ಮುಳುಗಿಹೋದರು. ಆ ಆನಂದದ ಭರದಲ್ಲಿ ಧನ್ಯ ಧನ್ಯ ! ಕನಕಾ! ನೀನೇ ಧನ್ಯನೆಂಬ ಉದ್ಗಾರವು ಅವರ ಬಾಯಿಂದ ಹೊರಟಿತು.

ಅಹಹಾ! ಕನಕನ ಭಕ್ತಿಯು ಇನ್ನೆಂಥಾದ್ದೋ! ದೇವಋಷಿಗಳಿಗೂ ಅಗೋಚರನಾದ ಶ್ರೀ ಪರಮಾತ್ಮನ ಮೂರ್ತಿಯನ್ನು ಕೈಗನ್ನಡಿಯಂತೆ ಕಂಡುಕೊಂಡನು. ಧನ್ಯನು. ಪವಿತ್ರನು. ಬಳಿಕ ಕೇಳುವದೇನದೆ! ಸ್ವಾಮಿಗಳವರು ಕನಕನಿಗೆ ಅಧಿಕವಾದ ಮಾನ-ಮರ್ಯಾದೆಗಳನ್ನು ಮಾಡಿ ಅವನನ್ನು ತಮ್ಮ ಮಠದ ಸಂಗಡಲೇ ಕರಕೊಂಡು ನಡೆದರು. ಸತ್ಪುರುಷರಿಗೆ ನೀತಿಯೇ ಪ್ರಾಧಾನ್ಯವಲ್ಲದೆ ಜಾತಿಯಲ್ಲ ಅತಏವ "ನಡತೆ ಹೀನನಾದರೇನಯ್ಯಾ | ಜಗ | ದೊಡೆಯ ಭಕುತಿಯೊಂದಿದ್ದರೆ ಸಾಲದೆ" || ಎಂಬದಾಗಿ ದಾಸರು ಹೇಳಿಕೊಂಡಿರುವರು.

---

## ೨ ನೆಯ ಕಥೆ.



### (ಬಾಳೇಹಣ್ಣು ತಿಂದದ್ದು)



ಕನಕನು ಹರಿದಾಸನಾದ ಕೂಡಲೆ ದೇವ-ಬ್ರಾಹ್ಮಣರಲ್ಲಿ ಅಚಲವಾದ ಭಕ್ತಿಯುಳ್ಳವನಾಗಿ ಮಠದ ಸಂಗಡ ಹೊರಟನಷ್ಟೆ? ಅವರಿಳಿದುಕೊಂಡಲ್ಲೇ ತಾನೊಂದು ಕಡೆ ಇಳಿಯುವನು. ಎಲ್ಲರ ಭೋಜನವಾದ ಮೇಲೆ ತಾನೂ ಹೊರಗೆ ಕುಳಿತು ಭೋಜನ ಮಾಡುವನು. 'ಮನಸ್ಸಿದ್ದಲ್ಲಿ ಮಾರ್ಗವಿರುವದೆಂಬ' ಗಾದೆಯ ಮಾತು ಅಕ್ಷರಶಃ ನಿಜವಾದದ್ದು. ಕನಕನ ಮನಸ್ಸೆಲ್ಲ ದೇವರಲ್ಲಿ. ಭಕ್ತಿಯೂ ನಿಸ್ಸೀಮವಾದದ್ದು. ಇಂಥಲ್ಲಿ ಪರಮಾತ್ಮನು ಪ್ರೀತನಾಗದೆ ಇನ್ನೆಲ್ಲಿ ಆಗಬೇಕು? ಈ ಪ್ರಕಾರ ದೇವರಿಗೆ ಪ್ರೀತನಾದವನು ಶ್ರೀಗಳವರಿಗೆ ಪ್ರೀತ್ಯಾಸ್ಪದನಾಗುವದೊಂದಚ್ಚರಿಯೇ? ಆಗಿನಿಂದ ಸ್ವಾಮಿಗಳವರು ಕನಕನಲ್ಲಿ ವಿಶೇಷವಾದ ಗೌರವವನ್ನಿ

ಟ್ಟರು; ನುಡಿಯಲ್ಲಿ-ನಡೆಯಲ್ಲಿ-ದೇವರಪೂಜೆಯಲ್ಲಿ ಸಹ ಕನಕನ ಸದಾಚಾರವು ನಡೆಯುತ್ತಲಿತ್ತು. ಕನಕನ ಮಾತೇ ಕರ್ಣಭೂಷಣವು. ಹೀಗೆ ಬರಬರುತ್ತ ಮಠದಲ್ಲಿ ಅವನ ಗೌರವವು ಹೆಚ್ಚುತ್ತ ಹೋಯಿತು. ತೀರ್ಥವು ಸಹ ದೊರೆಯಹತ್ತಿತು. ಆದರೆ ಇದು ಅಲ್ಲಿಯ ಪಂಡಿತ-ಪಾಮರರಿಗೆ ಸರಿದೋರಲಿಲ್ಲ. ಯಾವನು ಜಾತಿ-ಕುಲಾಚಾರಗಳಿಂದ ಅತಿನಿಕೃಷ್ಟನೋ, ಯಾವನಿಗೆ ಒಂದು ಅಕ್ಷರವಾದರೂ ಓದು-ಬರಹವಿಲ್ಲವೋ, ಯಾವನ ಮುಖಾವಲೋಕನವು ಕೂಡಾ ಅತಿನಿಂದ್ಯವಾದುದೋ ಅಂತಹ ಕನಕನಿಗೆ ಶ್ರೀಗಳವರ ಮಠದಲ್ಲಿ—ದಿಗ್ದಂತಿಗಳಾದ ಪಂಡಿತರೆದುರಿಗೆ ಇಷ್ಟೊಂದು ಗೌರವವೇ? ಅಹಾ! ಇದೆಂತಹ ಅನ್ಯಾಯವೋ ಮುಖ್ಯವಾಗಿ ಶ್ರೀಗಳವರಿಗೆ ಬುದ್ಧಿ ಹೋಯಿತು. ಛೇ ಛೇ! ಇಂತಹ ಅವಮರ್ಯಾದೆಯಿಂದ ಇಲ್ಲಿರುವದಕ್ಕಿಂತಲೂ ತಿರಿದುಣ್ಣುವದು ಲೇಸಲ್ಲವೇ? ನಮ್ಮಿಂದಂತೂ ಇನ್ನು ಮೇಲಾಗದು. ಹೀಗೆಂಬದಾಗಿ ಗುಣಗುಟ್ಟ ಹತ್ತಿದರು. ಅದರಂತೆ ಸ್ವಾಮಿಗಳವರಿಗೆ ಅರಿಕೆಯನ್ನು ಮಾಡಿದರು. ಕನಕನನ್ನು ಮಠದಿಂದ ಹೊರಗೆ ನೂಕದೆ ಕಾಲಿಡಲಿಕ್ಕಿಲ್ಲವೆಂದು ಅವರ ಹಟ. ಆಗ ಶ್ರೀಗಳವರು ಅಜ್ಞರಾದ ಜನರನ್ನು ನೋಡಿ ಮುಗುಳ್ನಗೆ ನಕ್ಕು ಯಾಕಾಗಲೊಲ್ಲದು. ಕುರುಬನ ಮೇಲೆ ಕುರುಬತನವೇತಕ್ಕೆ? ನಿಮ್ಮ ಮನಬಂದಂತೆಯೇ ಮಾಡುವೆವೆಂದು ಆಶ್ವಾಸನವನ್ನು ಕೊಟ್ಟು ಕಳುಹಿದರು. ಕೆಲ ದಿನಗಳು ಕಳೆದವು; ಆ ಮೇಲೆ ಒಂದಾನೊಂದು ದಿವಸ ದೊಡ್ಡದೊಂದು ಸಭೆಯು ಯನ್ನೇರ್ಪಡಿಸಿ ಬ್ರಾಹ್ಮಣ ಮಂಡಲಿಯನ್ನೂ ಕನಕನನ್ನೂ ಮುಂದಕ್ಕೆ ಕರೆದು ರಾಸಿ ರಾಸಿ ಬಾಳೇಹಣ್ಣುಗಳನ್ನು ಅವರಲ್ಲಿ ಹಂಚಿ ಬಿಟ್ಟರು. ಮತ್ತು ಇವುಗಳನ್ನು ಯಾರೊಬ್ಬರೂ ಕಾಣದಂತೆ ತಿಂದು ಮೊದಲು ಬಂದವರಿಗೆ ದೊಡ್ಡ ಸಂಭಾವನೆ ಮಾಡುವೆವೆಂದೂ ಹೇಳಿದರು. ನೋಡಿರಿ ಬಾಳೇಹಣ್ಣು ಅಂದಕೂಡಲೆ ಭಾನವೇ ಹಾರಿತು. ಸಂಭಾವನೆಯ ಮಾತಿನಿಂದಂತೂ ಅವರಿಗಾದ ಆನಂದವನ್ನು ಹೇಳಲಾಸಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಹಣ್ಣುಗಳನ್ನು ಕಟ್ಟಿಕೊಂಡು ನಡೆದರು. ಯಾರು ಉಪ್ಪರಿಗೆಯ ಮೇಲೆ ಹೋದರು, ಯಾರು ಅಡಿಗೇಮನೆಯಲ್ಲಿ ಕುಳಿತರು; ದೇವಾಲಯಗಳನ್ನು ಕೆಲವರು ಸೇರಿದರು; ನೆಲಮನೆಗಳನ್ನು ಕೆಲವರು ಹೊಕ್ಕರು. ಕನಕನು ಮಾತ್ರ ಕದಲಲಿಲ್ಲ. ಹಣ್ಣನ್ನಿಟ್ಟುಕೊಂಡು ಹಾಗೇ ಕುಳಿತನು.

ಉಳಿದವರೆಲ್ಲರೂ ಕೊಟ್ಟಷ್ಟು ಹಣ್ಣುಗಳನ್ನು ಗಪಗಪನೆ ತಿಂದು ನಾಮುಂದೆ ನೀಮುಂದೆ ಎಂಬದಾಗಿ ಹುರುಪಿನಿಂದ ಬಂದರು. ಹಿಂದಕ್ಕೆ—ಮೊದಲು ಭೂಪ್ರದಕ್ಷಿಣೆಯನ್ನು ಮುಗಿಸಿಕೊಂಡು ಬಂದವರಿಗೆ ನನ್ನ ಮಗಳನ್ನು ಕೊಡುತ್ತೇನೆಂದು

ಬ್ರಹ್ಮದೇವನು ಹೇಳಲು ಇಂದ್ರಾದಿದೇವತೆಗಳೂ ತಮ್ಮ ತಮ್ಮ ವಾಹನಗಳನ್ನೇರಿ ಭೂಮಿಯನ್ನು ಸುತ್ತಿಬಂದ ಸಮಾಚಾರವೇ ಈಗಿನ ಪಂಡಿತಮಂಡಲಿಯವರದಾಯಿತು. ಕೂಡಲೆ ಶ್ರೀಗಳವರು—ಎಲ್ಲರೂ ಹಣ್ಣುತಿಂದು ಬಂದಿರೋ ಎಂದು ಪ್ರಶ್ನೆ ಮಾಡಲು ಸರ್ವರೂ ಹೌದೆಂದು ಒಮ್ಮೆಲೆ ಉತ್ತರ ಕೊಟ್ಟರು. ಆಗ ದೂರದಲ್ಲಿ ಕುಳಿತಿದ್ದ ಕನಕನ ಕಡೆಗೆ ನೋಡಿ—ಎಲೋ ಕನಕಾ ಹಣ್ಣು ತಿಂದು ಬಂದೆಯಾ ಎಂದರು. ಕನಕನು ಅತಿ ವಿನಯದಿಂದ ಸ್ವಾಮಿಗಳವರಿಗೆ ಸಾಷ್ಟಾಂಗ ಹಾಕಿ—ಮಹಾಪ್ರಭೋ! ಹಣ್ಣನ್ನು ಹೇಗೆ ತಿನ್ನಲಿ? ಯಾರೂ ಕಾಣದಂತೆ ತಿನ್ನಬೇಕೆಂದು ಅಪ್ಪಣೆಕೊಡಿಸೋಣವಾಗಿದೆ. ಅಂದಮೇಲೆ ಇದು ಕೈಗೂಡುವದೆಂತು? ಸರ್ವಾಂತರ್ಯಾಮಿಯೂ, ಸರ್ವಸಾಕ್ಷಿಭೂತನೂ ಆದ ಶ್ರೀಪರಮಾತ್ಮನು ಅಣು-ರೇಣು-ತೃಣ-ಕಾಷ್ಠಗಳಲ್ಲಿ ಸಹ ತುಂಬಿಕೊಂಡಿರಲು ಆತನಿಗೆ ಕಾಣದಂತೆ ಯಾವ ಕಾರ್ಯವನ್ನಾದರೂ ಮಾಡುವದಕ್ಕಾದೀತೇ? ಇದಲ್ಲದೆ ಸೂರ್ಯ, ಚಂದ್ರ, ನಕ್ಷತ್ರ, ದೇವತೆಗಳು ಮೊದಲಾದವರು ಮನುಷ್ಯರು ಮಾಡುವ ಕಾರ್ಯಗಳನ್ನು ಸರ್ವದಾ ನೋಡುತ್ತಲೇ ಇರುವರು. ಇಂತಹ ಇಕ್ಕಟ್ಟಿನಲ್ಲಿ ನನ್ನಿಂದ ಹಣ್ಣು ತಿನ್ನುವದಾಗಲಿಲ್ಲವೆಂದು * ಹೇಳಿ ಹಣ್ಣನ್ನು ಮುಂದೆ ಸುರುವಿದನು.

* ಒಮ್ಮೆ ಶ್ರೀಪುರಂದರ ದಾಸರು ಗುರುದರ್ಶನಕ್ಕೆಂದು ಶ್ರೀವ್ಯಾಸರಾಯರ ಮಠಕ್ಕೆ ಬಂದಾಗ ಅಲ್ಲಿದ್ದ ಕನಕದಾಸನನ್ನು ನೋಡಿ ಅವನನ್ನು ಹೊಗಳುವಾಗ ಈ ವಿಷಯವನ್ನು ಸ್ಪಷ್ಟವಾಗಿ ಉಲ್ಲೇಖಿಸಿರುವರು.

ರಾಗ—ಮುಖಾರಿ—ಝಾಪು

ಕನಕದಾಸನ ಮ್ಯಾಲೆ ದಯಮಾಡಲು ವ್ಯಾಸಮುನಿ ಮಠಿಕರೆಲ್ಲರು ದೂರುತಿಹರೊ || ಪ || ತೀರ್ಥವನು ಕೊಡುವಾಗ ಕನಕನ್ನ ಕರೆಯನಲು | ಧೂರ್ತರಾಗಿದ್ದ ವಿದ್ವಾಂಸರೆಲ್ಲಾ || ಸಾರ್ಥಕವಾಯಿತು ಇವರ ಸನ್ಯಾಶಿತನವೆಲ್ಲ | ಪೂರ್ತ್ಯಾರ್ಗಳೆಂದು ಯತಿನಗುತಲಿಹನು || ೧ || ಮರುದಿನ ಅವರವರ ಪರೀಕ್ಷಿಸಬೇಕೆಂದು | ಕರೆದು ವಿದ್ವಾಂಸರಾ ಕನಕಸಹಿತಾ || ತ್ವರಿತದಲಿ ಕರದಲ್ಲಿ ಕದಳಿಫಲವನೆ ಕೊಟ್ಟು | ಯಾರಿಲ್ಲದ ಬಳಿಗೆ ಹೋಗಿ ಮೆದ್ದುಬಾರೆನಲು || ೨ || ಊರ ಹೊರಗೆ ಹೋಗಿ ಬ್ಯಾರೆ ಬ್ಯಾರೆ ಕುಳಿತು | ತ್ವರಿತದಿಂ ಮೆದ್ದು ವಿದ್ವಾಂಸರೆಲ್ಲಾ । ತೋರಲಿಲ್ಲವು ಎನಗೆ ಏಕಾಂತಸ್ಥಳವೆನುತ | ಸಾರಿ ಕದಳಿಫಲವ ಮುಂದೆ ತಂದಿಟ್ಟಾ || ೩ || ಡಿಂಬದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ | ಇಂಬಾಗಿ ತತ್ವೇಶರೆಲ್ಲ ತುಂಬಿಹರೊ|| ತಿಂಬುವದು ಹ್ಯಾಂಗೆನುತ ವ್ಯಾಸರಾಯರ ಕೇಳೆ| ಸಂಭ್ರಮದಲವರೆಲ್ಲ ಕುಳಿತು ಕೇಳಿದರು || ೪ ||

ಕನಕನ ಬಾಯಿಂದ ಇಷ್ಟು ಶಬ್ದಗಳು ಹೊರಟವೋ ಇಲ್ಲವೋ ಅವನ ಮೇಲೆ ಹೊಟ್ಟೆಕಿಚ್ಚು ಪಡುತ್ತಿದ್ದ ಬ್ರಾಹ್ಮಣರ ಮೋರೆಗಳು ಬತ್ತಿ ಬಾಡಿದವು. ಬಾಯಿಯಿಂದ ಮಾತುಗಳು ಹೊರಡದಂತಾದವು. ನಾವು ಮಾಡಿದ್ದು ಸರ್ವಾಪರಾಧವಾಯಿತೆಂದು ಸಾಷ್ಟಾಂಗಪ್ರಣತರಾದರು. ಆಗ ಸ್ವಾಮಿಗಳವರು ಮರಿಕರನ್ನು ಕುರಿತು —ಎಲೈ ಪಂಡಿತರುಗಳಿರಾ! ದೇವರ ಲೀಲೆಯು ಅಗಾಧವಾದದ್ದು. ಆತನು ತನ್ನ ಭಕ್ತರಾದವರನ್ನು ವೈನೆಳಲಿನಂತೆ ಒಂದರಕ್ಷಣವಾದರೂ ಅಗಲಿರಲಾರನು. ಆತನನ್ನು ಭಕ್ತಿಯಿಂದ ಭಜಿಸುವವರಿಗೆ ದುಃಖಗಳುಂಟೇ? ಸುಮ್ಮನೆ ಕನಕನನ್ನು ಕೆಣಕಬೇಡಿರಿ; ಆತನ ಹರಿಭಕ್ತಿಯು ಅಪಾರವಾದದ್ದು, ಹೀಗೆಂದು ಉಪದೇಶಿಸಿದರು. ಲೋಕದಲ್ಲಿ ಹರ್ಯನುಗ್ರಹಕ್ಕಿಂತಲೂ ಗುರ್ವನುಗ್ರಹವು ಮಹತ್ವದ್ದಾಗಿರುವದು. ಇಂಥ ಗುರ್ವನುಗ್ರಹದ ಬಲದಿಂದ ಹರಿಯ ಅನುಗ್ರಹಕ್ಕೆ ಪಾತ್ರನಾದ ಕನಕಪ್ಪನು ಧನ್ಯನಲ್ಲವೇ?

> ಗುರು ಕರುಣ ಹೊಂದುವದು ಪರಮ ದುರ್ಲಭವಯ್ಯ | ಪರಿ ಪರಿ ವ್ರತಗಳ ಚರಿಸಲು ಫಲವೇನು | ಶರೀರಾದಿ ಪುತ್ರ-ಮಿತ್ರ-ಕಳತ್ರ ಬಾಂಧವರು | ಇರಿಸೋರೆ ಸದ್ಗತಿಗೆ ಸಾಧನದಿ | ನಿರುತವು ಗುರುಪಾದ ನಿಜವಾಗಿ ಮನದಲ್ಲರಿತು ಭಜಿಸಲು ಅಖಿಳ ಸಂಪದವಕ್ಕು ಪುರಂದರವಿಠಲ ||೧||
>
> (ಪುರಂದರದಾಸರು)

## ೩ನೆಯ ಕಥೆ.



## ವಾಸುದೇವ ಸಾಲಿಗ್ರಾಮವನ್ನು ಕಂಡುಹಿಡಿದದ್ದು.

'ಕಟ್ಟಿದ ಬುತ್ತಿ ಕಲಿಸಿದ ಮಾತು' ಕಡೆತನಕ ನಿಲ್ಲಲಾರವೆಂದು ಹಿರಿಯರು ಹೇಳುವ ಮಾತು ಸುಳ್ಳಲ್ಲ. ಶ್ರೀಗಳವರು ಮರಿಕರಿಗೊಮ್ಮೆ—ಕನಕನನ್ನು ಕೆಣಕಬೇಡಿರಿ, ಕೆಣಕಿ ತಿಣಕಬೇಡಿರಿ. ಎಂದು ಹೇಳಿ ಬಿಟ್ಟಿದ್ದರು. ಆದರೆ ಈ ಮಾತು ಬಹಳ ದಿವಸ ಉಳಿಯಲಿಲ್ಲ. ಉಂಡು ತಿಂದು ಹೇಗೆ ಸುಮ್ಮನೆ ಕುಳಿತುಕೊಳ್ಳುವದು? ಏನಾದರೊಂದು ಕುಚೋದ್ಯವು ಬೇಕಲ್ಲವೇ? "ಕನಕನು ಕಮ್ಮಿಕುಲದವನು ಅಲ್ಲದೆ ಅವನ ಎದೆ ಸೀಳಿದರೂ ಮೂರಕ್ಷರವಿಲ್ಲ. ಹೀಗಿದ್ದು ಇಂಥವನಿಗೆ ಹೆಚ್ಚು ಮರ್ಯಾದೆಯನ್ನು ಕೊಡುವುದೆಂದರೆ ನಮ್ಮೆಲ್ಲರ ಅಪಮಾನ ಮಾಡಿದಂತಾಗುತ್ತದೆ. ಇದು ತೀರ ಲಾಂಛನಾಸ್ಪದವಾದದ್ದು. ಮಾನಕ್ಕೆ ಹಾನಿಯಿದ್ದ ಈ ಠಾವಿನಲ್ಲಿರಲಾರೆವೆಂದು" ಸನ್ನಿಧಿಗೆ ದೂರಿಕೊಂಡರು. ಇಷ್ಟೇ ಅಲ್ಲ—'ಹೀನ ಪ್ರೇಷ್ಯಂ ಹೀನಸಖಂ ಹೀನಗೇಹ ನಿಷೇವಣಂ' ಎಂಬಂತೆ ಹೀನಜನರೊಡನೆ ಮಾಡುವ ಗೆಳೆ

ತನವೂ ಒಂದು ಉಪಪಾತಕವೆನಿಸುವದೆಂಬದಾಗಿ ಶಾಸ್ತ್ರವಿರುವದೆಂದು ಗುರುಗಳಿಗೆ ಬುದ್ಧಿಯನ್ನು ಕಲಿಸಿದರು. ಶ್ರೀವ್ಯಾಸರಾಯಸ್ವಾಮಿಗಳವರು ಪಾಂಡಿತ್ಯದಲ್ಲಿ ಹೇಗೋ ಹಾಗೆ ಲೋಕವ್ಯವಹಾರದಲ್ಲಿಯೂ ಅತ್ಯಂತ ಕುಶಲರು. ಅವರಿಗೆ ಇಂಥ ಶಾಸ್ತ್ರವನ್ನೇನು ಹೇಳಬೇಕಾಗಿರಲಿಲ್ಲ. ಪಂಡಿತರ ಮಾತಿಗೆ ನಗೆ ಬಂತು. ಅವರಿಗೆ ಹೇಳಿದರು—"ನ ಶೂದ್ರಾಭಗವದ್ಭಕ್ತಾ ವಿಪ್ರಾ ಭಾಗವತಾಸ್ಮೃತಾಃ ||

ಸರ್ವ ವರ್ಣೇಷು ತೇ ಶೂದ್ರಾಯೇಹ್ಯ ಭಕ್ತಾ ಜನಾರ್ದನೆ ||

ಅಂದರೆ—ಯಾರು ಪರಮಾತ್ಮನ ನಿಜವಾದ ಭಕ್ತರೋ ಅವರೇ ವಿಪ್ರರು. ಭಾಗವತರು. ಯಾರು ಆತನ ಭಕ್ತರಲ್ಲವೋ ಅಂಥವರೇ ಶೂದ್ರರು ಹೀಗಿರುವದ ರಿಂದಲೇ ಶ್ರೀರಾಮಚಂದ್ರನು ಬೇಡಜಾತಿಯವನಾದ ಗುಹನೊಡನೆ ಸಖ್ಯಬೆಳಿಸಿ ದನು. ರಾಮಾಯಣದೊಳಗಿನ ಸಾರವತ್ತಾದ ಇಂಥ ಭಾಗಗಳನ್ನು ನೀವು ಮನನ ಮಾಡಲಿಲ್ಲ. ಕನಕನು ಪರಮಾತ್ಮನ ಪ್ರಿಯಭಕ್ತನೆಂಬುದು ಗೊತ್ತಿಲ್ಲವೇ? ಒಳ್ಳೇದು ಮತ್ತೊಮ್ಮೆ ನಿಮ್ಮ ನಿದರ್ಶನಕ್ಕೆ ಬಂದರೆ ತಾನೇ ತಿಳಿಯುವದು. ಎಂದು ಸುಮ್ಮ ನಾದರು. ಕನಕನ ವರ್ಚಸ್ಸು ಹೆಚ್ಚುತ್ತ ಹೋದಂತೆ ಮಠದವರೆಲ್ಲ ಅವನ ಮೇಲೆ ಹೊಟ್ಟೆಕಿಚ್ಚು ಪಡಹತ್ತಿದರು. 'ಕೈಲಾಗದ್ದು ಮೈಯಲ್ಲ ಹರಕೊಂಡಿತೆಂಬ' ಗಾದೆಯಂತೆ ಚಾಡೀ ಹೇಳಲಿಕ್ಕೆ ಆರಂಭವಾಯಿತು. ಇದನ್ನು ಕೇಳಿ ಕೇಳಿ ಸ್ವಾಮಿ ಗಳವರಿಗಾದರೂ ಬೇಸರ ಬಂತೆಂದು ತೋರುತ್ತದೆ. ಆಗ ಒಂದು ದಿವಸ— ಶ್ರೀರಾಮದೇವರ ಪೂಜೆಯಲ್ಲ ಮುಗಿದದೆ ಜನರು ತೀರ್ಥಕ್ಕಾಗಿ ಒಬ್ಬರಮೇಲೊ ಬ್ಬರು ಅಹಂಪೂರ್ವ ಮಹಂಪೂರ್ವ ಮೆಂದು ಮುಂದೆ ಬರಹತ್ತಿದ್ದಾರೆ. ಇದೇ ಸಮಯವೆಂತು ಶ್ರೀಗಳವರು ಸಣ್ಣದೊಂತು ಸಾಲಿಗ್ರಾಮವನ್ನು ಕೈಯಲ್ಲಿ ಮುಚ್ಚಿ ಕೊಂಡು ಯಾರೂ ಅರಿಯದಂತಿದ್ದರು. ಅವರು ಆಸನದ ಮೇಲೆ ಕುಳಿತದ್ದೊಂದೇ ತಡ. ನನಗೆ ಮೊದಲು ತೀರ್ಥವನ್ನು ಕೊಡತಕ್ಕದ್ದು ನನಗೆ ಕೊಡತಕ್ಕದ್ದು ಎಂಬದಾಗಿ ಗಲಾಟೆ ಎದ್ದಿತು. ಶ್ರೀಗಳವರು ಅವರನ್ನೆಲ್ಲ ತಡೆದು ಸಾಲುಸಾಲಾಗಿ ಸುಮ್ಮನೆ ಕೂಡ್ರಹೇಳಿದರು. ಜನರಿಗೇನೋ ಆಶ್ಚರ್ಯವೆನಿಸಿತು. ಒಬ್ಬರ ಮೋರೆ ಯನ್ನೊಬ್ಬರು ನೋಡಹತ್ತಿದರು. ಸ್ವಾಮಿಗಳವರು ಕೈಯನ್ನು ಮುಂದೆ ಮಾಡಿ— ನನ್ನ ಕೈಯಲ್ಲಿರುವದೇನು? ಇದನ್ನು ಹೇಳಿದವರಿಗೇ ಮೊದಲು ತೀರ್ಥವೆಂದರು. ನಿಃಶಬ್ದವಾಯಿತು. ಎಲ್ಲರೂ ಮನದಲ್ಲಿಯೇ ಯೋಚಿಸ ಹತ್ತಿದರು. ಕೆಲವರು ತಮ್ಮ ಪ್ರತಿಷ್ಠೆ ಹೇಗಾದೀತೆಂದು ದೇವರನ್ನು ಬೇಡಿಕೊಳ್ಳಹತ್ತಿದರು. ಇಂಥ ಪೊಳ್ಳು ಭಕು ತಿಯ ಜನರಿಗೆ ದೇವರು ಹೇಗೆ ವಶವಾದಾನು? ಕೂಡಲೆ ಹೇಳಲಿಕ್ಕೆ ಆರಂಭಮಾ

ದಿದುವು. ಯಾರು ತುಳಸಿಯ ದಳವೆಂದರು; ಯಾರು ಸೇವಂತಿಗೆಯೆಂದರು; ಅಂಗಾ ರವೆಂದು ಕೆಲವರಂಗಲಾಚಿದರು; ಮತ್ತೆ ಯಾರು ಬರಿಗೈಯೆಂದು ಹೇಳಿದರು. ಹೀಗೆಯೇ ಎಲ್ಲರ ಸರತಿಗಳೂ ಮುಗಿದವು ಕನಕನೊಬ್ಬ ಮಾತ್ರ ಉಳಿದನು. ಅವನು ದೂರದಲ್ಲಿಯೇ ಕುಳಿತು ಇದನ್ನೆಲ್ಲ ನೋಡುತ್ತಿದ್ದನು. ಕಟ್ಟ ಕಡೆಗೆ ಅವನ ಸರತಿಯೂ ಬಂತು. ಆಗ ಕನಕನು ಶ್ರೀಗಳವರಿಗೆ ದೀರ್ಘದಂಡ ನಮಸ್ಕಾರ ಹಾಕಿ ಕೈಮುಗಿದುಕೊಂಡು ಅತಿ ವಿನಯದಿಂದ—ಮಹಾಸ್ವಾಮೀ ತಮ್ಮ ಕೈಯಲ್ಲೀಗ ಶ್ರೀವಾಸುದೇವನೇ ಸಾಕ್ಷಾತ್ಕರಿಸಿರುವನೆಂದು ಹೇಳಿ ಉಕ್ಕೇರಿದ ಭಕುತಿಯಿಂದ ನುತಿಸಹತ್ತಿದನು.* ಕೈಯಲ್ಲಿ ನೋಡುತ್ತಾರೆ! ಸಾಲಿಗ್ರಾಮವು ಹೊಳೆಯುತ್ತಲಿದೆ. ಎಲ್ಲರೂ ತಲೆಬಾಗಿಸಿದರು. ಮೋರೆಗಳು ಬತ್ತಿ ಇಷ್ಟಾದವು. ಕಡೆಗೆ ಕನಕನಿಗೆ ಶರಣಾಗತರಾಗಿ ಅತಿ ವಿನಯದಿಂದ ಬೇಡಿಕೊಂಡರು. ಲೋಕದಲ್ಲಿ ಸಜ್ಜನರ ಸತ್ವವು ಪ್ರಕಾಶಿತವಾಗಬೇಕಾದರೆ ದುರ್ಜನರು ಇದ್ದಷ್ಟು ನೆಟ್ಟಗೆ ಎಂದು ಹೇಳುವ ಮಾತು ಸುಳ್ಳಲ್ಲ. ಈ ವಿಷಯದಲ್ಲಿ ಒಬ್ಬ ಕನ್ನಡ ಕವಿಯು ಹೀಗೆ ಅಂದಿದ್ದಾನೆ.

( ಸಾಂಗತ್ಯ )

"ಕರಗಿಸೆ ಕಾಸೆ ಯೊರೆಯೆ ತೇಯೆ ನವನೀತ | ವರದುಗ್ಧ ಕನಕಮಲಯಜ||
ಕರಮೆಸೆವಂತೆ ದುರ್ಜನರ ಬಾಧೆಗೆ ಸ | ತ್ಪುರುಷರು ಗುಣವ ಮೆರೆವರು"||

( ಚಂದ್ರಪ್ರಭಚರಿತೆ )

ನವನೀತ (ಬೆಣ್ಣೆ) ವನ್ನು ಕರಗಿಸಲು, ಹಾಲನ್ನು ಕಾಸಲು, ಬಂಗಾರವನ್ನು ತಿಕ್ಕಲು, ಶ್ರೀಗಂಧವನ್ನು ತೇಯಲು—ಅವುಗಳ ಪ್ರಕಾಶವು ಹೆಚ್ಚುಚ್ಚಾಗುವ ಹಾಗೆ ದುರ್ಜನರ ಬಾಧೆಯಿಂದಲೇ ಸಜ್ಜನರ ಗುಣವು ಬೈಲಿಗೆ ಬರುವದು

---

*ರಾಗ—ಭೈರವಿ—ತಾಲ—ರೂಪಕ

ಈತನೀಗ ವಾಸುದೇವನು ಲೋಕದೊಡೆಯ । ಈತನೀಗ ವಾಸುದೇವನು || ಪ || ವ್ಯೋಮಕೇಶ ನಿಮ್ಮ ದೆಸೆಯ ಆ ಮಹಾಮಹಿಮೆಯುಳ್ಳ | ಸಾಮ ಜವನೇರಿ ಬರುವ ಶಕ್ತಿಯನೀಕ್ಷಿಸೀ || ಪ್ರೇಮದಿಂದ ಉರವನೊಡ್ಡಿ ಡಿಂಗರಿ ಗನ ಕಾಯ್ದ ಸಕಲ | ಸರ್ವದಾ ಬಡದಾದಿಕೇಶವನ್ನ ನೋಡಿರೋ ||೧||

ಈ ಮಾತನ್ನು ಶ್ರೀಪುರಂದರದಾಸರು ತಮ್ಮ ಪದದಲ್ಲಿ ಹೇಳಿದ್ದಾರೆ ೨ ನೇ ಕಥೆಯ ಕೆಳಗೆ ಟೀಪಿನಲ್ಲಿ ಹೇಳಿದ ಇವರ ಪದ ( ೫ ನುಡಿ ) ನೋಡಿರಿ.

---

ಕರದಲ್ಲಿ ಮೂರ್ತಿಯನು ಪಿಡಿದು ಕೇಳುತ್ತಿರಲು | ಅರಿಯದಜ್ಞಾನದಲಿ ಪೇಳುತಿರಲು | ತ್ವರದೆ ಕನಕನು ಬಂದು ವಾಸುದೇವರೂಪ | ಪರಬೊಮ್ಮ ಪುರಂದರ ವಿಠಲನೆಂದು ಪೇಳಿದನು || ೫ ||

## ೮ನೆಯ ಕಥೆ.

## ಕಲಶಗಳನ್ನು ತುಂಬಿತಂದದ್ದು.



ಪ್ರಿಯವಾಚಕರೇ, ಹರಿದಾಸನಾದ ಕನಕನ ಮಹಿಮೆಯು ಈಗಲಾದರೂ ಮಠಿಕರಿಗೆ ತಿಳಿದಿರಬಹುದಲ್ಲವೆ? ಏನೋ ಯಾರಿಗೆ ಗೊತ್ತು? ನಾವು ಹೇಗೆ ಹೇಳೋಣವೆಂದು ಅನುಮಾನಿಸುತ್ತೀರೇನು? ಹಾಗಾದರೆ ಈತನ ಇನ್ನೂ ಒಂದೆರಡು ಕಥೆಗಳನ್ನು ಕೇಳಿರಿ.

ಮಠಿಕರು ಕನಕನ ಮೇಲೆ ಕಾರುತ್ತಾರೆಂಬ ಮಾತು ಶ್ರೀಗಳವರ ಮನಸ್ಸಿಗೆ ಪೂರಾ ನಟ್ಟು ಹೋಗಿತ್ತು. ಅದನ್ನು ತೆಗೆದು ಹಾಕಬೇಕೆಂದು ಅವರು ಪರಿಪರಿಯಾಗಿ ಚಿಂತಿಸಿದರು. ಕೈಯಿಂದಾದಷ್ಟು ಉಪಾಯಗಳನ್ನು ಮಾಡಿದರು. ಇನ್ನೂ ಮಾಡುತ್ತಲೇ ಇದ್ದರು. ಒಂದಾನೊಂದು ದಿವಸ ಚಮತ್ಕಾರವೇನಾಯಿತು! ಮಠಿಕರೆಲ್ಲ ಒಂದು ಕಡೆ ಗುಂಪುಕೂಡಿ ಕನಕನನ್ನು ಆಡಿಕೊಳ್ಳಹತ್ತಿದ್ದರು. ಅವನ ಅಪಮಾನಮಾಡುವದೇ ಅವರ ದುಷ್ಟವಾದ ಆಲೋಚನೆ. ಅದು ಹೇಗೋ ಶ್ರೀಗಳವರ ಕಿವಿಗೆ ಬಿತ್ತು. ಏನು ಮಾಡಬೇಕು? ಅವರಿಗೆ ಬಹಳ ಯೋಚನೆಯಾಯಿತು. ಕಡೆಗೆ ಎಲ್ಲರನ್ನೂ ಕರೆಯಿಸಿ ಎಲ್ಲರ ಕೈಯಲ್ಲಿಯೂ ಒಂದೊಂದು ಕಲಶವನ್ನು ಕೊಟ್ಟು ನದಿಯಲ್ಲಿ ಸ್ವಚ್ಛವಾಗಿ ತೊಳೆದು ತುಂಬಿಕೊಂಡು ಬರ್ರಿ ಎಂದು ಹೇಳಿಬಿಟ್ಟರು. ಅದರಲ್ಲಿ ರಹಸ್ಯವೇನಿರುವದೆಂಬದನ್ನು ಯಾರೂ ಅರಿಯದೆ ಹೋದರು. ಸರ್ವಸಾಧಾರಣ ಸಂಗತಿಯೆಂದೇ ಭಾವಿಸಿದರು; ಆದರಿಂದ ಹೆಚ್ಚಿನ ವಿಚಾರಕ್ಕೆ ಹೋಗಲಿಲ್ಲ. ದುಡದುಡನೆ ನದಿಗೆ ಹೋಗಿ ತಿಕ್ಕಿ ತೊಳೆದು ತುಂಬಿಕೊಂಡು ಬಂದರು. ಕನಕನು ಇವರ ಹಾದಿಯನ್ನೇ ಬಿಟ್ಟಿದ್ದನು. ವೈರಿಯ ಮುಂದೆ ಬಲಾಚಾರ ಕೇಳಿದರೆಂಬ ಗಾದೆಯಂತೆ ಇವರಿದ್ದ ಕಡೆಗೆ ಯಾಕೆ ಬಂದಾನು? ಒಬ್ಬನೇ ಬೇರೊಂದು ಕಡೆಗೆ ದೂರ ಮರೆಯಲ್ಲಿ ಹೋಗಿ ತುಂಬಿಕೊಂಡು ಬಂದನು. ಎಲ್ಲರೂ ಶ್ರೀಗಳವರಿಗೆ ಅರಿಕೆ ಮಾಡಿದರು. ಅವರು ಬಂದು ನೋಡುತ್ತಾರೆ! ಎಲ್ಲರ ಕಲಶಗಳೂ ಥಳಥಳ ಹೊಳೆಯುತ್ತಲಿವೆ. ಕನಕನ ಕಲಶವು ಹೊಲಸುಹೊಲಸಾಗಿ ತೋರುತ್ತಿದೆ. ಇದರ ಮರ್ಮವು ಅವರಿಗೆ ಕೂಡಲೆ

ಗೊತ್ತಾಯಿತು. ಅಂತೇ ಈ ಉಪಾಯವನ್ನು ಮಾಡಿದ್ದರು, ಆದರೂ ಜನರ ವಿಡಂಬನೆಗಾಗಿ ಕನಕನನ್ನು ಕುರಿತು—ನೋಡಿದಿರಾ! ಕಲಶವನ್ನು ತುಂಬಿತರಲಿಕ್ಕೆ ಹೇಳಿದರೆ ಹಾಗೆಯೇ ತುಂಬಿ ಮಾತ್ರ ತಂದಿದ್ದಾನೆ. ಅದರ ಮೋರೆಯ ಮೇಲೆ ಇಷ್ಟು ಕೈಯನ್ನು ಸಹ ಆಡಿಸಿಲ್ಲ ಎಂದರು. ಮರಿಕರಿಗೆ ಇಷ್ಟು ಸಿಕ್ಕರೆ ಸಾಕಾಗಿತ್ತು. ಕೇಳುತ್ತೀರೇನು? ಸ್ವಾಮಿಾ—ಅವನು ಮೊದಲೇ ಕುರುಬನು. ನಮ್ಮ ಸರಿಗೆ ಹೇಗೆ ಬಂದಾನು? ತನ್ನ ತಿಳುವಳಿಕೆ ಇಷ್ಟಿಷ್ಟು ನೂಡುತ್ತಾನೆ. ಎಂಬದಾಗಿ ಒಳ್ಳೇ ಗಂಭೀರಮುದ್ರೆಯನ್ನು ತಾಳಿದಂತೆ ಸೆಟಸೆಟೆದು ಮಾತಾಡಹತ್ತಿದರು. ಈ ಮಾತುಗಳನ್ನೆಲ್ಲ ಕನಕನು ಕಿವಿಯಿಂದ ಕೇಳಿಕೊಂಡನು. ಅವನಿಗೆ ಸಿಟ್ಟು ಬರಲಿಲ್ಲ. ನಗೆ ಬಂತು. ಸ್ವಾಮಿಗಳವರಿಗೆ ಅಡ್ಡ ಬಿದ್ದು—ಪ್ರಭೋ, ಒಳಗಿನ ನಿಜವಾದ ತತ್ವವನ್ನರಿಯಬೇಕಾದರೆ ತಮ್ಮಂಥವರೇ ಅಲ್ಲದೆ ಪಾಮರನಾದ ನನ್ನಿಂದೇನಾದೀತು? ಸ್ವಾಮಿಯ ಚಿತ್ತಕ್ಕೆ ಬಂದಂತಾಗಲಿ. ಎಂದು ನುಡಿದು ಸುಮ್ಮನೆ ಕುಳಿತನು. ಮರಿಕರು ರೇಗಿ ಬಿದ್ದರು. ಸಿಟ್ಟಿನಿಂದ ಹಲ್ಲು ತಿನ್ನ ಹತ್ತಿದರು. ಕುರುಬನಾದ ಇವನಿಗೆ ಇಂತಹ ವೈರಾಗ್ಯದ ಮಾತುಗಳೇಕೆಂದು ಗರ್ಜಿಸಿದರು. ಶ್ರೀಗಳವರು ವಿನಯದಿಂದ ಅವರನ್ನು ಸಂತೈಸಿ—ಮರಿಕರಿರಾ! ನಿಮ್ಮ ನಿಮ್ಮ ಕಲಶಗಳನ್ನು ತೆಗೆದು ಒಳಭಾಗವನ್ನು ನೋಡಿರಿ ಹೇಗದೆ ಅನ್ನಲು ಅದರಂತೆ ನೋಡುತ್ತಾರೆ! ಒಳಗೆ ಮಣ್ಣುಮುದ್ದೆ. ಹೊಲಸು ತುಂಬಿದೆ. ಇದುವರೆಗೂ ಒಬ್ಬನ ಲಕ್ಷ್ಯಾಕ್ಕಾದರೂ ಬಂದಿದ್ದಿಲ್ಲ, ಆಗ ಸಿಟ್ಟಿನಿಂದ ಹೋಗಿ ಕನಕನ ಕಲಶವನ್ನು ನೋಡಿದರು. ಒಳಭಾಗ್ಗಲು ಥಳಥಳಿಸುತ್ತಿತ್ತು. ಎಲ್ಲರ ಮೋರೆಗಳು ಕೆಳಗಾದವು. ಪಶ್ಚಾತ್ತಾಪವು ಹುಟ್ಟಿತು. ಗುರುಗಳಿಗೆ ಸಾಷ್ಟಾಂಗ ಹಾಕಿದರು. ಗುರುಗಳು ಮತ್ತೆ ಈ ಪ್ರಕಾರವಾಗಿ ಉಪದೇಶ ಮಾಡಿದರು—ಎಲೈ ಜನರುಗಳಿರಾ! ಮನಸ್ಸಿನಲ್ಲಿ ಕಲ್ಮಷವನ್ನಿಟ್ಟುಕೊಂಡು ಮೇಲೆ ಸ್ನಾನಮಾಡಿದರೇನು? ದಾನ ಮಾಡಿದರೇನು? ಜಪ-ತಪಗಳಿಂದೇನು? ಚರ್ಮತೊಳೆದರೆ ಕರ್ಮಹೋದೀತೇ? ಬರೀ ಮೇಲುಪಚಾರಗಳಿಂದ ಏನೂ ಉಪಯೋಗವಾಗದು. ಮನಸ್ಸು ನಿರ್ಮಲವಿರಬೇಕು. ಅದೊಂದು ಇತ್ತೆಂದರೆ ಉಳಿದ ಎಲ್ಲ ಕರ್ಮಗಳೂ ಅನವಶ್ಯಕ. ದೇವರು ಭಕ್ತಿಗೆ ಒಲಿಯುವನಲ್ಲದೆ ಡಂಭಾಚಾರಕ್ಕೆ ಒಲಿಯನು.

ಹೃದಯದ ಮಲವನ್ನು ತೊಳೆಯಲರಿಯದೆ ತಾವು | ಉದಯದೊಳೆದ್ದು ಮಿಾಂದು ಗದಗುಟ್ಟಿದರೆ ಅದರಿಂದೇನು ಫಲ | ಅದಕಿಂತ ಉದಯಾಸ್ತಮಾನದೊಳಗಿಪ್ಪ | ಮುದಿಕಪ್ಪೆ ಮಾಡಿದ ತಪ್ಪೇನಯ್ಯ ಪುರಂದರ ವಿಠಲನ

ನಾಮವ ನೆನೆಯದೆ ದಿನಕ್ಕೆ ನೂರು ಬಾರಿ ಮುಳುಗಿದರೇನಯ್ಯ || ೧ ||

(ಪುರಂದರದಾಸರು.)

ಕಂಡ ನೀರೊಳು ಮುಳುಗಿ ದೇಹವ | ದಂಡಿಸಿದ ಫಲವೇನು ದಂಡಕ |
ಮಂಡಲುಗಳನೆ ಧರಿಸಿ ಯತಿಯೆಂದೆನಿಸಿ ಫಲವೇನು ||
ಅಂಡಜಾಧಿಪ ನಂಸಗನ ಪದ | ಪುಂಡರೀಕದಿ ಮನವಹರ್ನಿಶಿ |
ಬಂಡುಣಿಯವೋಲಿರಿಸಿ ಸುಖಬಡದಿಪ್ಪ ಮಾನವನೂ || ೧ ||

(ಜಗನ್ನಾಥದಾಸರು.)

## ೫ನೆಯ ಕಥೆ.



## ದೇವರಿಗೆ ತುಲಸೀ ಏರಿಸಿದ್ದು.



ವಾಚಕರೇ! ಕನಕನಿಂದ ಇದಕ್ಕೂ ಹೆಚ್ಚಾದ ಕೌತುಕವಿನ್ನೊಂದಾಯಿತು. ಅದನ್ನು ಕೇಳಿದರಂತೂ ನೀವು ಏನನ್ನುವಿರೋ?

ಶ್ರೀಗಳವರ ಸಂಚಾರವು ಹೊರಬಿತ್ತು. ಕನಕನು ಅವರ ಬೆನ್ನು ಹತ್ತೇ ಇದ್ದನು. ಸಂಸ್ಥಾನವು ಯಾವದೋ ಒಂದು ಊರಲ್ಲಿ ಪಯಣಮಾಡಿತು. ಮರು ದಿವಸ ಮುಂಜಾನೆ ಒಳ್ಳೇ ನಸುಕಿನಲ್ಲಿಯೇ ಅದು ಹೊರಡತಕ್ಕದ್ದು; ಅಲ್ಲದೆ ಮುಂದೆ ಎಲ್ಲಿಗೆ ಹೋಗಬೇಕೆಂಬದೂ ಗೊತ್ತುಮಾಡಲ್ಪಟ್ಟಿತ್ತು. ಹೀಗೆ ಗೊತ್ತಾಗಿ ಆ ಹೊತ್ತಿನ ಊಟ-ಉಡಿಗೆಗಳೆಲ್ಲ ಮುಗಿದು, ಎಲ್ಲರೂ ಸುಖವಾಗಿ ನಿದ್ದೆಮಾಡುತ್ತಿದ್ದರು. ಅಷ್ಟರಲ್ಲಿ ಕನಕನಿಗೆ ಒಂದು ನಿದ್ದೆಹತ್ತಿ ಎಚ್ಚರವಾಯಿತು. ಹೊರಗೆ ಹೋಗಿ ನೋಡಿದನು; ಬೆಳಕು ಹರಿದಂತೆ ಕಂಡುಬಂತು ನಿಜವಾಗಿ ಇನ್ನೂ ಬೆಳಕು ಹರಿದಿದ್ದಿಲ್ಲ; ಆದರೂ ಕನಕನು ಅದನ್ನು ಹೆಚ್ಚು ಪರೀಕ್ಷಿಸದೆ, ಮುಂದಿನ ಊರಿಗೆ ಹೋಗಲು ಸಿದ್ಧನಾದನು. ಸಿದ್ಧನಾಗಲಿಕ್ಕಾದರೂ ಏನು ತಡ? ಅವನೇನು ಕೋಟು ಜಾಕೀಟುಗಳನ್ನು ತೊಟ್ಟುಕೊಳ್ಳಬೇಕಾಗಿದ್ದಿಲ್ಲ; ಬೂಟು ಸ್ಟಾಕಿಂಗ್ಸಗಳನ್ನು ಹಾಕಿಕೊಳ್ಳುವಂತಿದ್ದಿಲ್ಲ. ಇದ್ದಂಥ ಒಂದು ಒಡಕ ತಂಬೂರಿಯನ್ನು ಬಗಲಲ್ಲಿ ಇಟ್ಟುಕೊಂಡು ನಡೆದನು. ಹೀಗೆ ಒಬ್ಬನೇ ಮುಂದಾಗಿ ಹೋಗುವದಕ್ಕೆ ಕಾರಣವೇನಿರಬಹುದೆಂಬದನ್ನು ನಮ್ಮ ಶೀಘ್ರಬುದ್ಧಿಯ ವಾಚಕರು ಊಹಿಸದೆ ಇರಲಿಕ್ಕಿಲ್ಲ.

ಸಂಸ್ಥಾನದವರು ತನ್ನನ್ನು ದ್ವೇಷಿಸುತ್ತಾರಾದಕಾರಣ ಇಂಥವರ ಕೂಡ ಹೋಗುವದಕ್ಕಿಂತ ತಾನೊಬ್ಬನೇ ಹೋಗುವದರಿಂದ ಪರಮಾತ್ಮನ ನಾಮಸ್ಮರಣೆಗೆ ಹೆಚ್ಚು ಅನುಕೂಲವಾಗುವದೆಂದು ಬಗೆದೇ ಹೊರಟನೆಂದು ಅವರು ತಿಳಿದುಕೊಂಡಿರಬಹುದು. ಹೌದು! ಅವರ ಕಲ್ಪನೆಯು ಯಥಾರ್ಥವಾದದ್ದು. ಸಂಸ್ಥಾನವು ಯಾವ ಊರಿಗೆ ಹೋಗುವದೋ, ಅಲ್ಲಿಗೆ ತುಸ ಮುಂದಾಗಿಯೇ ಹೋಗಿ ಕುಳಿತುಬಿಟ್ಟರೆ ತೀರಿತೆಂದು ಕನಕನು ಯೋಚಿಸಿದ್ದನು; ಬೇರೆ ಏನೂ ಇಲ್ಲ. ಬಹಳಮಾಡಿ ಸಾಧು-ಸತ್ಪುರುಷರು ಜನರ ಗುಂಪಿನಲ್ಲಿ ಸೇರುವದಕ್ಕೆ ಇಚ್ಛಿಸದೆ, ಏಕಾಂತವಾಸವನ್ನೇ ಹೆಚ್ಚಾಗಿ ಬಯಸುತ್ತಿರುವರು. ಜನ ಸಮೂಹದಲ್ಲಿ ಕುಳಿತು ಹಾಳುಹರಟೆ ಹೊಡೆಯುವದಕ್ಕಿಂತ ಏಕಾಂತದಲ್ಲಿ ಕುಳಿತು ದೇವರನ್ನು ಧ್ಯಾನಿಸುವದು ರುಚಿಯಾಗಿ ತೋರುವದೇ ಇದರ ಕಾರಣವು. ಅದರಂತೆಯೇ ಕನಕನು ಹೊರಬಿದ್ದನು.

ಅರುಣೋದಯದ ಕಾಲ; ಕೋಳಿ ಕೂಗುವ ಸಮಯ; ಅದೇ ಝುಮು-ಝುಮು ನಸುಕು ಹರಿಯುತ್ತಿತ್ತು. ಇಷ್ಟು ಹೊತ್ತಿಗೆ ಸರಿಯಾಗಿ ನಟ್ಟಡವಿಗೆ ಹೋದನು. ಅಲ್ಲಿ ಒಂದು ಕಡೆಗೆ ತುಲಸಿಯ ಗಿಡಗಳು ಹೇರಳವಾಗಿ ಬೆಳೆದದ್ದು ಅವನ ಕಣ್ಣಿಗೆ ಬಿತ್ತು. ಹೋಗಿ ನೋಡಿನು; ಒಂದಲ್ಲ, ಎರಡಲ್ಲ ನೂರಾರು ಗಿಡಗಳು ಹಚ್ಚಗೆ ಹಸರುಮುರಿಯುತ್ತ ಮಲ ಮಲ ಎನ್ನುತ್ತಿದ್ದವು. ಅದೇ ನಸುಕಾದ್ದರಿಂದ ತಂಗಾಳಿಯು ಸುಳಿಯುತ್ತಿತ್ತು, ಮೇಲಾಗಿ ನಿರ್ಜನಪ್ರದೇಶ. ಈಗ ಕನಕನಿಗಾದ ಆನಂದವನ್ನು ಎಷ್ಟೆಂದು ಹೇಳೋಣ? ಮೊದಲೇ ದೇವರ ಧ್ಯಾನದಲ್ಲಿ ಆಸಕ್ತನಾಗಿರುವ ಈತನಿಗೆ ತುಳಸಿಯ ಗಿಡಗಳನ್ನು ಕಂಡ ಬಳಿಕಂತೂ ನೂರುಮಡಿ ಆನಂದವು ಹೆಚ್ಚಾಯಿತು. ಆಗ ಅವನು ಮನಸ್ಸಿನಲ್ಲಿ —ಅಹಾ! ಈ ಸ್ಥಾನವು ಎಷ್ಟು ರಮಣೀಯವಾಗಿದೆ! ತುಳಸಿಯಗಿಡಗಳು ಎಷ್ಟು ಮನೋಹರವಾಗಿ ಬೆಳೆದಿವೆಯಲ್ಲ! ಇಂಥ ವನಮಧ್ಯದಲ್ಲಿ ಕುಳಿತು ಮನದಣಿಯುವಂತೆ ತುಳಸಿಯದಳಗಳನ್ನು ತೆಗೆದು ಭಗವಂತನಿಗೆ ಅರ್ಪಿಸುವದಕ್ಕಿಂತ ಹೆಚ್ಚಿನದೇನಿದೆ? ನಾನಂತೂ ಇದನ್ನು ಬಿಟ್ಟು ಮುಂದಕ್ಕೆ ಕಾಲಿಡಲಾರೆನು ಎಂಬದಾಗಿ ಆಲೋಚಿಸಿದ್ದನು. ಇಷ್ಟು ಯೋಚಿಸಿದ್ದೊಂದೇ ತಡ! ಮನಸ್ಸಿನಲ್ಲಿಯೇ ಭಗವಂತನ ಮೂರ್ತಿಯನ್ನು ಸ್ಥಾಪಿಸಿ ಸಹಸ್ರನಾಮಗಳಿಂದ ತುಳಸಿಯ ದಳಗಳನ್ನು ಅರ್ಪಿಸಹತ್ತಿದನು. ಇದಾದರೂ ಮನಸಿನಿಂದಲೇ ನಡೆಯಿತು. ಕೈಯಿಂದ ಒಂದು ದಳವನ್ನೇನೂ ಅವನು ತೆಗೆದಿರಲಿಲ್ಲ. ಮತ್ತು ಪರಮಾತ್ಮನಿಗೆ ಅರ್ಪಿಸಿರಲಿಲ್ಲ. ಎಲ್ಲವೂ ಮಾನಸಪೂಜೆ. ಆದರೇನಾಯಿತು? ದೇವರು ಪ್ರೀತನಾಗನೇ?

೧ ಪೂಜಾಸ್ವೀಕಾರೇ ದೇವದೇವಸ್ಯ ವಿಷ್ಣೋರ್ವಿದ್ವದವಿದ್ವತ್ವಂ ಕಾರಣಂ ನೈವಚಿಂತ್ಯಂ || ವಿಪ್ರಾದ್ಯತ್ವಂ ಶ್ವಪಚತ್ವಂತಥೈವ ಪೂಜಾ ಸ್ವೀಕಾರೇ ಭಕ್ತಿರೇವೈಕಹೇತುಃ||

೨ ವಿದ್ವಜ್ಜನೋಯದಿ ಡಂಭಾಕೃತಾ ಚೇತ್ಪೂಜಾಂ ನೈವ ಸ್ವೀಕರೋತ್ಯೇವನಿತ್ಯಂ || ಶ್ವಪಚೋಯದಿಭಕ್ತಿಪೂರ್ವಂ ಕೃತಂಚೇತ್ಪೂಜಾಂಹರಿಸ್ವೀಕರೋತ್ಯೇವನಿತ್ಯಂ ||

(ಗರುಡಪುರಾಣ ಬ್ರಹ್ಮಕಾಂಡ)

(೧ ದೇವರು ಪೂಜಾ ಸ್ವೀಕಾರ ಮಾಡುವಾಗ್ಗೆ ಇವನು ವಿದ್ಯಾವಂತ-ಇವನು ಅವಿದ್ಯಾವಂತ-ಇವನು ಬ್ರಾಹ್ಮಣ-ಇವನು ಶ್ವಪಚ ಎಂಬದಾಗಿ ಎಣಿಸುವದಿಲ್ಲ. ಮುಖ್ಯವಾಗಿ ಭಕ್ತಿಯೊಂದನ್ನೇ ನೋಡುತ್ತಾನೆ)

(೨ ಪಂಡಿತರೇ ಆಗಲಿ ಭಕ್ತಿಯಿಲ್ಲದೆ ಒರೇ ಡಂಭಾಚಾರಕ್ಕೆ ಪೂಜೆಮಾಡಿದರೆ ಅವರ ಪೂಜೆಯನ್ನು ಸ್ವೀಕರಿಸುವದಿಲ್ಲ. ಯಾರು ಭಕ್ತಿಪೂರ್ವಕವಾಗಿ ಪೂಜಿಸುವರೋ ಅವರು ಶ್ವಪಚರಾಗಲಿ (ಚಾಂಡಾಲರಾಗಲಿ) ಅವರ ಪೂಜಯನ್ನು ಆದರದಿಂದ ಸ್ವೀಕರಿಸಿ ಸಂತೋಷಪಡುತ್ತಾನೆ.)

ಭಕ್ತನ ಅಚಲವಾದ ಭಕ್ತಿಗೆ ಭಗವಂತನು ಕುಣಿದಾಡಹತ್ತಿದನು. ಕನಕನು ಆನಂದಪರವಶನಾದನು. ಅವನಿಗೆ ಈಗ ಮೈಮೇಲೆ ಖಬರೆಯಿಲ್ಲ. ಚಿತ್ತವೆಲ್ಲ ದೇವರ ಚರಣಾವಿಂದದಲ್ಲಿಯೇ. ಎಂಟುಗಂಟೆಯು ಹೊತ್ತಾಯಿತು. ಆಗ ತಾನೇ ಮಾನಸ ಪೂಜೆಯನ್ನು ಮುಗಿಸಿಕೊಂಡು ಆತ್ಮಾನಂದದಿಂದ ದೇವರನ್ನು ನುತಿಸುತ್ತ ಹಾಡೀಹಿಡಿದನು. ವಾಚಕರೇ! ಇದರಲ್ಲಿ ಆಶ್ಚರ್ಯವೇನೆಂದು ಶಂಕಿಸುವಿರೋ? ಹಾಗಿದ್ದರೆ ಈಗಲೇ ಶ್ರೀಗಳವರ ಸನ್ನಿಧಿಗೆ ತೆರಳಿರಿ. ಬೇಗನೆ ನಡಯಿರಿ ತಡಮಾಡಬೇಡಿರಿ. ಅವರು ಅಲ್ಲಿಯೇ ಹಾದು ಹೋಗುವರು. ಆಗ್ಗೆ ಆದರ ಚಮತ್ಕಾರವೇನೆಂಬುದು ನಿಮಗೆ ಗೊತ್ತಾಗುವದು.

ಬೆಳಗಿನ ಝಾವವಾಗುತ್ತಲೆ ಶ್ರೀಗಳವರು ಹೊರಟರು. ಬರಬರುತ್ತ ಮಾರ್ಗದಲ್ಲಿ ಮೇಲಿನ ತುಳಸಿಯ ಬನವು ಅವರ ದೃಷ್ಟಿಗೆ ಬಿತ್ತು. ಕೂಡಲೆ ಪಲ್ಲಕ್ಕಿಯನ್ನು ನಿಲ್ಲಿಸ ಹೇಳಿದರು. ದೊಡ್ಡದೊಂದು ತುಲಸಿಯ ವನವನ್ನೇ ಕಂಡದ್ದರಿಂದ ಅವರಿಗೆ ಹೇಳತೊಡದಷ್ಟು ಸಂತೋಷವಾಯಿತು. ಆ ಸಂತೋಷದ ಭರದಲ್ಲಿ ಈ ಹೊತ್ತು ಇಲ್ಲಿಯೇ ಕುಳಿತು ಯಥೇಚ್ಛವಾದ ತುಳಸಿಯ ದಳಗಳಿಂದ ದೇವರ ಪೂಜೆ

ಮಾಡಬೇಕೆಂದು ಅವರ ಮನಸ್ಸಿನಲ್ಲಿ ಹುಟ್ಟಿತು. ಆದರಿಂದ ತಡವಾಡದೆ ಪಲ್ಲಕ್ಕಿಯಿಂದಿಳಿದು ಹತ್ತರ ಬಂದು ನೋಡುತ್ತಾರೆ! ಮೊದಲಿನ ಆನಂದವು ಕಡಿಮೆಯಾಯಿತು. ಮನಸ್ಸಿನ ಇಚ್ಛೆಯೂ ಬಯಲಾಯಿತು; ಯಾಕೆಂದರೆ ಗಿಡಗಳು ಇದ್ದಕಿದ್ದ ಹಾಗಿದ್ದರೂ ಅದರೊಳಗಿನ ಪ್ರತಿಯೊಂದು ದಳವೂ ನಿರ್ಮಾಲ್ಯದಂತೆ ತೋರುತ್ತಿತ್ತು. ಅವು ಬಾಡಿಹೋಗಿದ್ದವು ಶ್ರೀಗಳವರಿಗೆ ಬಹಳ ಸೋಜಿಗವೆನಿಸಿತು. ಒಂದೆರಡು ಗಿಡಗಳು ಹೀಗಿರುವವೆಂದು ಅಂದಾರೇ! ಯಾವತ್ತೂ ಗಿಡಗಳ ಸ್ಥಿತಿಯು ಒಂದೇ ಆಗಿತ್ತು. ಕನಕನ ಮಾನಸಪೂಜೆಯಿಂದಲೇ ಈ ಪರಿಣಾಮವಾಗಿರಬೇಕೆಂದು ಕೂಡಲೆ ಅವರು ತರ್ಕಿಸಿದರು. ಕನಕನ ಯೋಗ್ಯತೆಯು ಅವರಿಗೆ ಗೊತ್ತಿತ್ತು. ಆದ್ದರಿಂದ ಹಿಂದಿರುಗಿ 'ಕನಕಾ' ಎಂದು ಕೂಗಿದರು ಅವನು ಅಲ್ಲಿ ಇದ್ದರೆ, ಓ ಅನ್ನಬೇಕಷ್ಟೇ? ಉತ್ತರವಿಲ್ಲ. ಮೊದಲೇ ಕನಕನ ಮೇಲೆ ಕಣ್ಣಿಟ್ಟ ಮರಿಕರಾದರೂ ಈಗ ಉತ್ತರವನ್ನು ಯಾಕೆ ಕೊಟ್ಟಾರು? ಕೊಡಲಿಲ್ಲ. ಕಡೆಗೆ ತಾವೇ ಯೋಚನೆ ಮಾಡಿ ಅವನು ಮುಂದೆ ಹೋಗಿರಬಹುದೆಂದು ಊಹಿಸಿದರು. ಅವನ ಈ ಕೃತ್ಯವನ್ನು ನೋಡಿ ಅವರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕಣ್ಣುಗಳಲ್ಲಿ ಆನಂದಾಶ್ರುಗಳು ಉದುರಿದವು. ಮೈಮೇಲೆ ರೋಮಾಂಚನಗಳೆದ್ದವು. ಮಾತಾಡುವದು ಸಹ ಅವರಿಂದಾಗದಾಯಿತು. ಹಾಗೆಯೇ ನಡೆದು ಮೊದಲು ನೇಮಿಸಿದ್ದ ಸ್ಥಳಕ್ಕೆ ಮುಟ್ಟಿದರು. ಎಲ್ಲಕ್ಕೂ ಮೊದಲು ಕನಕನನ್ನು ಕಾಣುವದು ಅವರ ಮನಸ್ಸಿನಲ್ಲಿತ್ತು. ಅವನನ್ನು ನೋಡಿದಕೂಡಲೆ ಹತ್ತರ ಕರೆದು ಅತ್ಯಾನಂದದಿಂದ ಮೈಮೇಲೆ ಕೈಯಾಡಿಸಿದರು. ಧನ್ಯ ಧನ್ಯನೆಂದು ಹೊಗಳಿದರು! ಕನಕನಿಗಾದ ಆನಂದವನ್ನು ಯಾರು ಬಣ್ಣಿಸಬೇಕು? ಅವನು ಸ್ವಾಮಿಗಳ ಪಾದದಮೇಲೆ ಬಿದ್ದು, ಪರಿ ಪರಿಯಿಂದ ನುತಿಸಿದನು. ನೆರೆದವರೊಬ್ಬರಿಗೂ ಇದರ ಗುಟ್ಟೇ ಗೊತ್ತಾಗಲಿಲ್ಲ. ಹೇಗೆ ಗೊತ್ತಾಗಬೇಕು? ಗೊತ್ತಾಗುವಂಥ ವಿಷಯವೇ ಅಲ್ಲ. ಅಷ್ಟು ಹೊತ್ತಿಗೆ ಮಧ್ಯಾಹ್ನವಾಯಿತು. ಶ್ರೀಗಳವರು ಸ್ನಾನಕ್ಕೆದ್ದರು. ತುಸ ಹೊತ್ತಿನಲ್ಲಿಯೇ ಶ್ರೀರಾಮದೇವರ ಪೂಜೆಗೆ ಆರಂಭವಾಗುವದು. ಜನರೆಲ್ಲರೂ ಕೈ ಕಟ್ಟಿಕೊಂಡು ಸುತ್ತಲೂ ನಿಂತರು; ಸ್ವಾಮಿಗಳವರು ದೇವರ ಪೆಟ್ಟಿಗೆಯನ್ನು ಬಿಚ್ಚಿದರು. ದೇವರ ಮೇಲೆ ತುಳಸಿಯ ದಳಗಳ ರಾಶಿಯೇ ಬಿದ್ದಿದೆ. ಇಷ್ಟಾಗಿ ಆ ದಳಗಳು ತುಸವಾದರೂ ಬಾಡದೆ ಈಗ ಏರಿಸಿದ ಹಾಗಿದ್ದವು. ಅದನ್ನು ಕಂಡ ಕೂಡಲೆ ಶ್ರೀಗಳಿಗೆ ಕನಕನ ಮಾನಸಪೂಜೆಯು ನೆನಪು ಬಂತು. ಕನಕನ ಸಮಾನ ಪುಣ್ಯಪುರುಷನನ್ನು ಕಾಣೆವೆಂದು ಆಡಿದರು. ಮತ್ತು ಅದನ್ನೆಲ್ಲ ಬಂದ ಜನರಿಗೂ

ಮರಿಕರಿಗೂ ತೋರಿಸಿ:—ಬರುವಾಗ ನಾವು ತುಳಸಿಯು ವನವನ್ನು ಕಂಡೆವಲ್ಲ; ಗಿಡಗಳು ಬಾಡಿಹೋಗಿದ್ದವು. ಆಗ ಅದರ ಕಾರಣವು ನಿಮಗೆ ಗೋಚರವಾಗಿರ ಲಿಕ್ಕಿಲ್ಲ. ಈಗ ನೋಡಿರಿ! ಕನಕನು ಅದೇ ಹಾದಿಯಿಂದ ಬರವಾಗ ಮಾನಸ ಪೂಜೆಯನ್ನು ಮಾಡಿರುತ್ತಾನೆ. ಅಲ್ಲಿಯ ದಳಗಳೆಲ್ಲಾ ಪೆಟ್ಟಿಗೆಯೊಳಗಿನ ದೇವರ ತಲೆಯ ಮೇಲೆ ಬಂದಿರುತ್ತವೆ. ನಾವು ಪೆಟ್ಟಿಗೆಯಲ್ಲಿ ತುಳಸಿಯ ದಳಗಳನ್ನು ಇಟ್ಟಿ ದ್ದಿಲ್ಲವೆಂಬುದು ನಿಮಗೆ ಗೊತ್ತುಂಟು. ಈಗ ತಿಳಿಯಿತೇ? ಕನಕನ ಮಹಿಮೆಯನ್ನು ಎಷ್ಟು ವರ್ಣಿಸೋಣ! ಆಹಹಾ! ಏನು ಪುಣ್ಯವಂತನೋ! ಭಕ್ತಿಯಾದರೂ ಎಂಥ ದಿರುವದೋ!! ಧನ್ಯನು! ಧನ್ಯನು!! ಎಂದು ಹೊಗಳಹತ್ತಿದರು

ಶ್ರೀ ತುಳಸಿಯ ಮಾಹಾತ್ಮ್ಯವನ್ನು ವಿಜಯದಾಸರು ಹೀಗೆ ಬಣ್ಣಿಸುತ್ತಾರೆ.

(ರಾಗ— ಧೂಪಾಳಿ ಅಟತಾಳ)

ಶ್ರೀ ತುಳಸಿ ಸೇವೆಯನು ಪ್ರೀತಿಯಿಂದಲಿ ಮಾಡಿ | ಗಾತುರದ ಮಲವ ಳಿದು ಮಾತೆಯೆಂದನಿತರೊಳು ಪಾತಕವ ಪರಿಹರಿಸಿ ಪು | ನೀತರನು ಮಾಡು ವದು ಯಾತಕನುಮಾನವಯ್ಯಾ ||ಪಲ್ಲ||

ಮೂಲದಲಿ ಸರ್ವ ತೀರ್ಥಗಳುಂಟು ತನ್ಮಧ್ಯ | ಕಾಲವಿೂರದೆ ಸರ್ವ ನದ ನದಿಗಳು ದೇವಗಣ ಸಹಿತ | ಮೇಲೆ ದಳ ಒಂದೊಂದರಲಿ ಒಂದೊಂದು ವ ೞರುತಿಯು | ವಾಲಯವಾಗಿ ನೆಲಸಿಹದು || ಮೂಲೋಕದ ಧರ್ಮ ವ್ರತಕ್ಕೆ ಸರಿ ಮಿಗಿಲೆನಿಸುವದು | ನೀಲಮೇಘಶ್ಯಾಮಗರ್ಪಿಸಿದ ತುಲಸಿ ನಿ | ಮಾಲ್ಯವನು ಸತತ ಕರ್ಣದಲಿ ಧರಿಸಿದ ಮನುಜ | ಕಾಲನಾಳಿಗೆ ಶೂಲನಯ್ಯಾ || ೧ || ಇತ್ಯಾದಿ.

ಭಕ್ತರಲ್ಲಿರುವ ಭಗವಂತನ ಅಂತಃಕರಣವನ್ನು ದಾಸರು ಹೀಗೆ ಬಣ್ಣಿಸಿದ್ದಾರೆ.

ಉಣುತುಣುತ ಮೈಮರೆದು ಕೃಷ್ಣಾ | ಶರಣವೆನಲು ಕೈಕೊಂಬಸಭರ್ಥಕ| ಜನನಿ ಭೋಜನ ಸಮಯದಲಿ ಕೈಯೊಡ್ಡುವಂದದಲೀ ||

(ಜಗನ್ನಾಥರಾಯರು.)

———

## ೭ನೆಯ ಕಥೆ.

—ಃ(೦)ಃ—

## ದೇವರಿಂದ ಆಭರಣಗಳನ್ನು ಇಸುಕೊಂಡದ್ದು.

ಕನಕಪ್ಪನು ಶ್ರೀ ವ್ಯಾಸರಾಯರ ಸನ್ನಿಧಿಯಲ್ಲಿಯೇ ಇರಹತ್ತಿದಬಳಿಕ ಅವನಿಗೆ ಒಮ್ಮೆ ಜ್ವರೋಪದ್ರವವುಂಟಾಯಿತು. ಬೇಗನೆ ಕಡಿಮೆಯಾಗಲಿಲ್ಲ. ಆಗ್ಗ ಶ್ರೀಗಳವರು—'ಎಲೋ ಕನಕಾ! ನೀನು + ಉಡುಪಿಗೆ ಹೋಗಿ ಶ್ರೀ ಕೃಷ್ಣಸ್ವಾಮಿಯ ದರ್ಶನವನ್ನು ತೆಗೆದುಕೋ ಅಂದರೆ ಜ್ವರವು ದೂರಾಗುವದು. ಕಲಿಯುಗದಲ್ಲಿ ಕೃಷ್ಣಮೂರ್ತಿಯು ಉಡುಪಿಯನ್ನು ಅಲಂಕರಿಸಿರುತ್ತಾನೆ.' ಎಂದು ಅಪ್ಪಣೆ ಮಾಡಿದರು. ಕನಕಪ್ಪನು ಅವರ ಆಜ್ಞೆಯನ್ನು ಶಿರಸಾವಹಿಸಿ ಉಡುಪಿಗೆ ಹೊರಟನು. ಮೊದಲೇ ಅತನಿಗೆ ಶರೀರದಲ್ಲಿ ಆಲಸ್ಯವುಂಟಾಗಿದ್ದಿತು. ಮೇಲೆ

---

+ ರಜತಪೀಠಂ ಕುಮಾರಾದ್ರಿಃ ಕುಂಭಕಾಶೀಧ್ವಜೇಶ್ವರಃ ||
ಕ್ರೋಡ ಗೋಕರ್ಣ ಮೂಕಾಂಬಾಃ ಸಪ್ತೈತಾಮೋಕ್ಷದಾಯಿಕಾಃ ||

ಪರಶುರಾಮ ಕ್ಷೇತ್ರದ ಮೋಕ್ಷಪ್ರದಗಳಾದ ೭ ಕ್ಷೇತ್ರಗಳಲ್ಲಿ ಮೊದಲನೇದಾಗಿಯೂ ಮಾಧ್ವಮತಕ್ಕೆ ಮಾತೃಭೂಮಿಯಾಗಿಯೂ ಇರುವ ಈ ಉಡುಪಿ ಕ್ಷೇತ್ರವು 'ರಜತಪೀಠಪುರ' (ರೌಪ್ಯಪೀಠ) ವೆಂಬದಾಗಿ ಸ್ಕಂದಪುರಾಣದ ಸಿಂಹಾದ್ರಿ ಖಂಡದಲ್ಲಿ ವರ್ಣಿತವಾಗಿದೆ.

ಈ ಕ್ಷೇತ್ರ ಮಾಹಾತ್ಮ್ಯವನ್ನು ಸಾಕ್ಷಾತ್ ಭೃಗುಋಷಿಗಳ ಅಂಶಭೂತರಾದ ವಿಜಯದಾಸರು ಈ ರೀತಿಯಾಗಿ ಬಣ್ಣಿಸುತ್ತಾರೆ.

ಉಡುಪಿಯಯಾತ್ರೆ ಸುಳಾದಿ

ಸ್ಥಿತಿಗತಿಯಾದ ಉಡುಪಿಯಾತ್ರೆ ಮಾಡುವಗೋಸುಗ ಪವಮಾನಿಯ ಮತವ ಹೊಂದಿ ನಿತ್ಯಪಾವನರಾಗಿ ನಡೆದವರ ಸೌಭಾಗ್ಯ ದೇವತೆಗಳು ಕೊಂಡಾಡುವರು ಜೀವನ್ಮುಕ್ತರಾಗಿ ಕುಲಗೋತ್ರ ವಡಗೂಡಿ ಕೈವಲ್ಯದಲ್ಲಿ ಮುದ್ದು ಸುಖಿಸುವರೊ ಜೇವೇಶ ಮಧ್ವಮುನಿಯಿಂದ ಪೂಜೆಯಗೊಂಡ ಶ್ರೀ ಶ್ರೀನಿವಾಸ ವಿಜಯವಿಠ್ಠಲರಾಯ ಕಾವಾನು ಕೃಪೆಯಿಂದ ಮಾರ್ಗತೋರಿ || ೧ ||

ಕಾಲಕಾಲಕ್ಕೆ ಊಟವಿಲ್ಲ ಉಡಿಗೆಯಿಲ್ಲ. ಹೀಗಾಗಿ ಬಹಳ ಬಳಲಿಕೆಯಿಂದ ಅಂತೂ ಇಂತೂ ಉಡುಪಿಯನ್ನು ಬಂದು ಮುಟ್ಟಿದನು. ಇನ್ನೇನು ಸ್ವಾಮಿಯ ಸಂದರ್ಶನವಾಗುವದು. ಎಂಬದೊಂದು ಆತನಿಗೆ ಅಪಾರವಾದ ಸಂತೋಷ. ಈ ಸಂತೋಷದ ಭರದಲ್ಲಿ ಹಸಿವು ಬಾಯಾರಿಕೆಗಳು ಕೂಡ ಮರೆತು ಹೋದವು. ನೆಟ್ಟನೆ ಸ್ವಾಮಿಯ ಗುಡಿಗೆ ಹೊರಟನು. ಆದರೆ ಗುಡಿಯೊಳಗಿನ ಜನರು ಈತನ ಹರಕು ಬಟ್ಟೆಗಳನ್ನು ಕಂಗಾಲ ಸ್ಥಿತಿಯನ್ನು ನೋಡಿ ಯಾವನೋ ಒಬ್ಬ ಕಮ್ಮಿ ಕುಲದ ಹುಚ್ಚನಿರಬಹುದೆಂದು ತಿಳಿದು ಒಳಗೆ ಬಿಡಲಿಲ್ಲ. ಕನಕನಿಗೆ ದೇವರ ದರ್ಶನವಾಗಲಿಲ್ಲ. ದೇವರು ವರವ ಕೊಟ್ಟರೂ ಪೂಜಾರಿಯು ವರವ ಕೊಡಲಿಲ್ಲ. ಎರಬ ಗಾದೆಯ ಸಮಾಚಾರವಾಯಿತು. ಆಗ ಕನಕನು ಅಲ್ಲಿಯೇ ಕುಳಿತು ದೇವರನ್ನು ಧ್ಯಾನಿಸಹತ್ತಿದನು. ಎಷ್ಟೋ ಹೊತ್ತಿನ ಮೇಲೆ ಹಸಿವು ತೃಷೆಗಳಿಂದ ಕಂಗಾಲಾದ ಇವನು ದೇವರ ಧ್ಯಾನದಲ್ಲಿ ಆಸಕ್ತನಾದಂತೆಯೇ ನಿದ್ರಾಪರವಶನಾದನು. ನಿದ್ರೆಯಲ್ಲಿ ಆರ್ತರಕ್ಷಕನಾದ ಸ್ವಾಮಿಯು ಶಿಶುವಿನ ರೂಪದಿಂದ ಬಂದು 'ನನ್ನನ್ನು ಸ್ತುತಿಸಲಾರೆಯಾ' ಎಂದು ಪ್ರಶ್ನೆ ಮಾಡಿದನು ಕನಕನಿಗೆ ಪರಮಾನಂದವಾ

---

ಸಕಲ ರಕ್ಷಕರು ಮಾತೆಯ ತರುವಾಯ ಸಕಲ ಪೋಷಕರು ತಂದೆಯ ತರುವಾಯ ಸಕಲ ಭೋಗಗಳು ಸ್ವರ್ಗದ ತರುವಾಯ ಸಕಲ ಸೌಖ್ಯಗಳು ಮುಕ್ತಿಯ ತರುವಾಯ ಸಕಲ ವ್ರತಗಳು ಹರಿದಿನದ ತರುವಾಯ ಸಕಲ ಕ್ಷೇತ್ರಗಳು ಉಡುಪಿಯ ತರುವಾಯ ||

ಇದು ಅಲ್ಲದೆ—'ಯಾವಾಗಲೂ ಮತ್ತಾನಂದವೊ' ಎಂಬ ದೇವರ ನಾಮದಲ್ಲಿ ಉಡುಪಿ ಯಾತ್ರಾರ್ಥವಾಗಿ ಹೊರಟವರ ಫಲವನ್ನು ಹೀಗೆ ಹೇಳುತ್ತಾರೆ.

ಒಂದು ಹೆಜ್ಜೆಯನಿಟ್ಟು ಸಾಗಿ ಬರುತಲಿದೆ ವೊಂದು ಸುರರೊಳು ಗಣನೆಯೊಳು ವೊಂದಕ್ಕೆ ನೂರಾರು ಕೋಟಿಯಾಗದ ಫಲಾ ತಂದು ಕೊಡುವದು ಅಜಕಲ್ಪ ಪರಿಯಂತರಾ ||

ಇನ್ನು—ದಕ್ಷಶಾಪದಿಂದ ನಿಸ್ತೇಜನಾದ ಚಂದ್ರನು ಇಲ್ಲಿ ನಿಂತು ತಪಸ್ಸು ಮಾಡಿ ದೇವರಿಂದ ಅನುಗ್ರಹ ಪಡೆದ ಕಾರಣ ಇದಕ್ಕೆ ಇಂದುಕ್ಷೇತ್ರವೆಂದೂ-ಉಡುಪಿಯೆಂದೂ ಹೆಸರಾಯಿತು.

ದ್ವಾರಾವತೀಂ ಸಕಲಭಾಗ್ಯವತೀಮುಪೇಕ್ಷ್ಯ |
ಗೋಪಾಲ ಬಾಲಲಲನಾಕರಪೂಜನಂಚ ||
ವಾರ್ಧಿಂ ವಧೂಗೃಹಮತೀತ್ಯ ಸ ಮಧ್ವನಾಥೋ |
ತತ್ರಾಸ್ತಿ ತದ್ರಜತ ಪೀಠಪುರಂಗರೀಯಃ ||

ಯಿತು. ಅವನು ಕನಸಿನಲ್ಲಿಯೇ ಹೀಗೆ ಹೇಳಿಕೊಂಡನು. "ಸ್ವಾಮಿ, ಶ್ರೀ ಕೃಷ್ಣಮೂರ್ತೀ! ನಿನ್ನ ಹೊರತು ನನಗೆ ದಿಕ್ಕಾರು? ನಿನ್ನ ಚರಣವನ್ನೇ ನಂಬಿದ ಈ ದಾಸನು ನಿನ್ನನ್ನಲ್ಲದೆ ಯಾರನ್ನು ತುತಿಸಬೇಕು.? ಆದರೆ ಹಸಿವು ಮಾತ್ರ ಬಹಳವಾಗಿರುವದು. ಅದರ ಬಾಧೆಯನ್ನು ತಡೆಯಲಾರೆನು."

ಕನಕಪ್ಪನು ಇಷ್ಟು ಹೇಳಿದ ಕೂಡಲೆ ಶಿಶುವು ಏನು ಉತ್ತರ ಕೊಡಬೇಕು? ಹಾಗಾದರೆ ನಾನೂ ಹಸಿದಿದ್ದೇನೆ. ಮೊದಲು ನನಗೆ ಏನಾದರೂ ತಿನ್ನಲಿಕ್ಕೆ ಕೊಡು, ಎಂದು ತಾನೇ ತನ್ನ ಪುಟ್ಟ ಕೈಯನ್ನು ಮೊದಲು ಚಾಚಿಬಿಡಬಹುದೇ! ಭೋ ವಾಚಕವೃಂದ! ನೋಡಿದಿರಾ ಭಗವಂತನ ಲೀಲೆಯನ್ನು? ಹಿಂದಕ್ಕೆ ಪಾಂಡವರ ಪತ್ನಿಯಾದ ದ್ರೌಪದಾದೇವಿಯು ಸ್ವಾಮಿಯನ್ನು ಸ್ತೋತ್ರಮಾಡಿ ಈ ಅಸಮಯದಲ್ಲಿ ಬಂದ ದೂರ್ವಾಸರ ಅರವತ್ತು ಸಾವಿರ ಶಿಷ್ಯರಿಗೆ ಅನ್ನವನ್ನು ಹೇಗೆ ಕೊಡಲಿ? ಎಂದು ಪ್ರಾರ್ಥಿಸಿಕೊಂಡಾಗ ಸ್ವಾಮಿಯು ಮೊದಲು ನನಗೇ ಹಸಿವಾಗಿದೆ. ಅಕ್ಷಯ ಪಾತ್ರೆಯನ್ನು ತೆಗೆದು ನೋಡು. ಏನಾದರೂ ಇದೆಯೋ ಎಂದು ಹೇಳಿ ಅದರಲ್ಲಿದ್ದ ಒಂದು ಕಡ್ಡಿಯಿಂದಲೇ ತೃಪ್ತನಾಗಿ ಅಷ್ಟು ಜನರಿಗೂ ಷಡ್ರಸೋಪೇತವಾದ ಇಚ್ಛಾಭೋಜನವನ್ನು ಕೊಟ್ಟುಬಿಟ್ಟನಂತೆ. ಇದೇ ಸ್ವಾಮಿಯು ಒಮ್ಮೆ ದರಿದ್ರನಾದ ವಿದುರನ ಮನೆಯಲ್ಲಿ ಹೊಕ್ಕು ಆತನು ಎಲ್ಲಿಯೋ ಇಟ್ಟಿದ್ದ ಮುಕ್ಕು ಹಾಲನ್ನು ಕುಡಿದು ಜನರು ಆಶ್ಚರ್ಯಪಡುವಂತೆ ಕೌರವೇಂದ್ರನಮನೆಯವರೆಗೂ ಹಾಲಿನ ಕಾಲುವೆಯನ್ನು ಹರಿಸಿಬಿಟ್ಟನಂತೆ! ಸುದಾಮನಿಂದ ಒಂದೇ ಒಂದು ಮುಷ್ಟಿ ಅವಲಕ್ಕಿಯನ್ನು ಪಡೆದು. ಆತನಿಗೆ ಸ್ವರ್ಗಾಧಿಕವಾದ ಐಶ್ವರ್ಯವನ್ನಿತ್ತನಂತೆ. ಅದರಂತೆ ಈಗ ನಮ್ಮ ಕನಕಪ್ಪನಿಗೂ ಕೈನೀಡಿರುವನು. ಆತನೇನು ಕೊಡುವನೋ, ಈತನೇನು ತೃಪ್ತಿಯಾಗುವನೋ ಯಾರು ಬಲ್ಲರು? ಕನಕನಿಗೆ ಎಚ್ಚರವಾಯಿತು. ನೋಡುತ್ತಾನೆ! ಶಿಶುವು ಅಲ್ಲಿರಲಿಲ್ಲ. ಬಹು ಸೋಜಿಗವಾಯಿತು. ಆಗ ತಾನೇ ತಿಳಿದುಕೊಂಡನು. ಸ್ವಾಮಿಯು ಅನುಗ್ರಹಿಸುವದಕ್ಕಾಗಿಯೇ ಈ ರೀತಿ ನನ್ನನ್ನು ವಂಚಿಸಿದನೆಂದು ಕೂಡಲೆ ಎದ್ದು ಎಲ್ಲಿಯೋ ಬೇಡಿಕೊಂಡು ತೆಗೆದುಕೊಂಡು ಬಂದಿದ್ದ ಗೋದಿಯ ಹಿಟ್ಟನ್ನು ಕಲಿಸಿ ರೊಟ್ಟೀಮಾಡಿ ಆ ಹಸಿ ರೊಟ್ಟಿಯನ್ನೇ ಶ್ರೀಕೃಷ್ಣನಿಗೆ ಅರ್ಪಣಮಾಡಿಬಿಟ್ಟನು. ಭಗವಂತನು ಭಕ್ತವತ್ಸಲನಲ್ಲವೇ! ಆತನು ಭಕ್ತನ ಭಕುತಿಗೆ ಮೆಚ್ಚಿ ಅದೇ ರಾತ್ರಿ ತನ್ನ ಮೈಮೇಲಿನದೊಂದು ಆಭರಣವನ್ನು ತಂದು.—ಇದನ್ನು ಈ ಊರಲ್ಲಿರುವ ವೈಕುಂಠನಲ್ಲಿಟ್ಟು ನಿನ್ನ ಹಸಿವನ್ನು ತೀರಿಸಿಕೋ, ಎಂದು ಹೇಳಿ ಹೋದನು. ಕನಕಪ್ಪನ ಕೈಯಲ್ಲೀಗ ಅಮೌಲ್ಯವಾದ

ರತ್ನಹಾರವು ದೊರೆತಿರುವದು. ಅದನ್ನು ಮಾರಿ ಹೊಟ್ಟೆ ತುಂಬಿಕೊಳ್ಳೆಂದು ದೇವರೇ ಸಾಕ್ಷಾತ್ತಾಗಿ ಅಪ್ಪಣೆ ಕೊಟ್ಟಿರುವನು. ಅಂದಮೇಲೆ ಅದರಿಂದ ಸಹಸ್ರಾವಧಿ ಲಕ್ಷಾವಧಿ ರೂಪಾಯಿಗಳನ್ನು ಸಂಪಾದಿಸಿ ಬೇಕಾದಹಾಗೆ ಸೌಖ್ಯದಿಂದ ಇರಬಹುದಲ್ಲವೇ? ಕನಕಪ್ಪನು ಹಾಗೆ ಮಾಡಲಿಲ್ಲ. ಹಾರವನ್ನು ತಕ್ಕೊಂಡು ಹೋಗಿ ಉತ್ತರದಿಕ್ಕಿನ ಕಡೆಯ ಮನೆಯಲ್ಲಿದ್ದ ವೈಕುಂಠಶಾನುಭೋಗನೆಂಬ ವ್ಯಾಪಾರಿಯಲ್ಲಿ ಅದನ್ನಿಟ್ಟು ತನ್ನ ಹಸಿವೆಗೆ ಬೇಕಾದಮಟ್ಟಿಗೆ ಎಂಟು ಆಣೆಯನ್ನು ಮಾತ್ರ ಇಸಕೊಂಡು ಬಂದು ಜೀವನ ಮಾಡಿದನು. ಆಹಹಾ! ಕನಕಪ್ಪನ ಮನಸ್ಸು ಇನ್ನೆಷ್ಟು ದೃಢವಾದದ್ದೋ! ಆತನ ಭಕ್ತಿಯು ಎಷ್ಟು ಬಲವಾದದ್ದೋ!! ಅಂತೇ ದೇವರು ಆತನಿಗೆ ಒಲಿದನು. ಪರರ ದುಡ್ಡೆಂದರೆ ಬಾಯಿ ತೆಗೆಯುವ ಸ್ವಾರ್ಥಪರರಾದ ನಮ್ಮಂಥ ಪಾಮರರಿಗೆ ದೇವರ ಗುರುತಾದರೂ ಹೇಗೆ ಹತ್ತೀತು?

ಕನಕಪ್ಪನ ಹಸಿವು ಅಡಗಿತು. ದೇವರನ್ನು ಮನದಣಿ ಸ್ತೋತ್ರ ಮಾಡಿದನು. ಈಗ ಆತನಿಗೆ ಮತ್ತೊಂದು ಉದ್ಯೋಗವಿಲ್ಲ. ಹಗಲೆಲ್ಲ ದೇವರ ಧ್ಯಾನ. ಭಿಕ್ಷೆಬೇಡುವದಕ್ಕೆ ಸಹ ವೇಳೆಯಿಲ್ಲ. ಹೊಟ್ಟೆಯು ಕೇಳುವದೇನು? ಮರುದಿವಸ ಮತ್ತೆ ಹಸಿವು ತಲೆದೋರಿತು. ಸ್ವಾಮಿಯು ಆ ಹೊತ್ತು ಮತ್ತೊಂದು ಆಭರಣವನ್ನು ತಂದು ಕೊಟ್ಟು ಬಿಟ್ಟನು. ಇನ್ನೇನ! ಕನಕನು ಅದನ್ನೂ ವೈಕುಂಠನ ಮನೆಯಲ್ಲಿಟ್ಟು ಮತ್ತೆ ಎಂಟಾಣೆಯನ್ನು ತಕ್ಕೊಂಡು ಹಸಿವನ್ನು ಅಡಗಿಸಿಕೊಂಡನು. ಇದೇ ರೀತಿ ದಿನಾಲು ಒಂದೊಂದು ಆಭರಣವನ್ನು ಸ್ವಾಮಿಯು ಕೊಡುತ್ತಲೇ ಇದ್ದನು. ಕನಕಪ್ಪನ ಜೀವನವು ನಡೆಯುತ್ತಲೇ ಇದ್ದಿತು. ತಿಂಗಳಾಯಿತು, ಎರಡು ತಿಂಗಳಾಯಿತು. ಶ್ರೀಕೃಷ್ಣನ ಪೂಜೆ ಮಾಡುತ್ತಿದ್ದ ಪರ್ಯಾಯದ ಸ್ವಾಮಿಗಳವರಿಗೆ ಇದು ತಿಳಿಯಲೊಲ್ಲದು. ಆಭರಣಗಳೇನೋ ಮೈಮೇಲೆ ಇಲ್ಲದಂತಾಗಿರುವದು ಕಣ್ಣಿಗೆ ಕಾಣುತ್ತದೆ. ಎಲ್ಲಿ ಹೋದವೆಂದು ಹೇಳುವದು ಕಷ್ಟ. ಯಾಕಂದರೆ ತಮ್ಮ ಹೊರತು ಒಳಗೆ ಯಾರೂ ಕಾಲಿಡುವದಿಲ್ಲೆಂದು ಅವರಿಗೆ ಗೊತ್ತು. ಅಂದ ಮೇಲೆ ಅವು ಹೇಗೆ ಹೋದವು? ಇಲ್ಲವೆಂದರೆ ತಮಗೇ ಅಗೌರವ, ಜನರಲ್ಲಿ ನಗೆಗೇಡು. ಸುಮ್ಮನಿದ್ದರೆ ಇನ್ನೂ ಹಲಕೆಲವು ಉಳಿದವೂ ಸ್ವಲ್ಪ ದಿವಸದಲ್ಲಿ ಎಲ್ಲಿ ಹೋಗಿ ಬಿಡುವವೋ ಎಂಬದೊಂದು ಹೆದರಿಕೆ. ಸ್ವಾಮಿಯೇ ತನ್ನ ಭಕ್ತನ ಉದ್ಧಾರಕ್ಕಾಗಿ ಹೀಗೆ ಮಾಡಿರುವನೆಂಬುದು ಪಾಪ! ಅವರಿಗೇನು ಗೊತ್ತು? ಹೀಗಾಗಿ ಬಹಳ ಯೋಚನೆಯುಂಟಾಯಿತು. ಏಕಾಂತದಲ್ಲಿ ಈ ಸುದ್ದಿಯನ್ನು

ಸೋದೇ* ಮಠದಲ್ಲಿರುವ ಶ್ರೀ †ವಾದಿರಾಜತೀರ್ಥರವರಿಗೆ ತಿಳಿಸಿದರು.

ವಾದಿರಾಜ ಸ್ವಾಮಿಗಳು ಸಾಮಾನ್ಯರಲ್ಲ. ಮಹಾ ತಪಸ್ವಿಗಳು. ಅವರು ಜ್ಞಾನದೃಷ್ಟಿಯಿಂದ ನೋಡಿ ಇದನ್ನೆಲ್ಲ ಅರಿತುಕೊಂಡು "ನಾವು ಬರುವೆವು; ಭಯ ಪಡಬೇಡಿರಿ" ಎಂದು ಹೇಳಿ ಕಳುಹಿದರು. ಬೇಗನೆ ಉಡುಪಿಗೆ ದಿಗ್ವಿಜಯವನ್ನು ಮಾಡಿದರು. ಮಾರ್ಗಮಧ್ಯದಲ್ಲಿ ಅಂದರೆ ಉಡುಪಿಯಿಂದ ಹನ್ನೆರಡು ಮೈಲುಗಳ ಮೇಲಿರುವ ಪೆರಡೂರೆಂಬ ಗ್ರಾಮ ಅಲ್ಲಿ ಅನಂತಪದ್ಮನಾಭ ದೇವಾಲಯವಿದೆ. ಶ್ರೀ ವಾದಿರಾಜಸ್ವಾಮಿಗಳು ಅಲ್ಲಿಗೆ ಬಂದರು. ಇತ್ತ ಕನಕನೂ ಅವರ ಆಗಮನ ವನ್ನು ಜ್ಞಾನದೃಷ್ಟಿಯಿಂದ ತಿಳಿದು ಪೆರಡೂರಿಗೆ ಹೋಗಿ ಶ್ರೀಗಳವರಿಗೆ ಸಾಷ್ಟಾಂಗ ಹಾಕಿದನು. ಶ್ರೀಗಳು ಕನಕನನ್ನು ಸತ್ಕರಿಸಿ ಉಡುಪಿಗೆ ಕರೆತಂದು ಶ್ರೀಕೃಷ್ಣ ದರ್ಶನವನ್ನು ಮಾಡಿಸಿ ಚಂದ್ರಶಾಲೆಯಲ್ಲಿ ಹೋಗಿ ಕನಕಾ! ದೇವರ ಆಭರಣಗ ಳೆಲ್ಲಿವೆ? ಎಂದು ಕೇಳಿದರು. ಹತ್ತಿರದಲ್ಲಿದ್ದವರಿಗೆ ಇದು ಬಹಳ ಸೋಜಿಗವಾಗಿ ಕಾಣಿಸಿತು ಹೊರಗಿರುವ ಕನಕನಿಗೆ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟ ಆಭರಣಗಳ ಸಮಾಚಾರವೇನು ಗೊತ್ತಾಗಬಹುದೆಂದು ಅವರು ನಗಹತ್ತಿದರು. ಕನಕನು— ಸ್ವಾಮಿ! ಭಗವಂತನ ಅಪ್ಪಣೆಯಂತೆ ಅವುಗಳನ್ನು ವೈಕುಂಠ ಶಾನುಭೋಗನಲ್ಲಿ ಟ್ಟಿರುವೆನೆಂದನು. ಶ್ರೀಗಳವರು ವೈಕುಂಠನನ್ನು ಕರೆಯಿಸಿ—ಶ್ರೀ ಕೃಷ್ಣಮೂರ್ತಿ ಯ ಆಭರಣಗಳು ನಿನ್ನಲ್ಲಿ ಇವೆಯೋ ಎಂದು ಕೇಳಿದರು ಅದಕ್ಕೆ ಅವನು—

---

* ಇದು ಮೈಸೂರು ದೇಶದ ಶಿವಮೊಗ್ಗಾ ಡಿಸ್ಟ್ರಿಕ್ಟಿಗೆ ಸಮೀಪದಲ್ಲಿರುವ ಶಿರ್ಸಿಯ ಹತ್ತಿರದಲ್ಲಿದೆ.

† ಶ್ರೀಮದಾಚಾರ್ಯರು (ಮಧ್ವಾಚಾರ್ಯರು) ತಮ್ಮ ಸಹೋದರ ರಾದ ಶ್ರೀ ವಿಷ್ಣುತೀರ್ಥರಿಗೆ ಅನುಗ್ರಹಿಸಲ್ಪಟ್ಟ ಸಂಸ್ಥಾನ ಪರಂಪರೆಯಲ್ಲಿ ಶ್ರೀ ಮದ್ವಾಗೀಶ ತೀರ್ಥರೆಂಬವರಿಂದ ಚತುರ್ಥಾಶ್ರಮವನ್ನು ಹೊಂದಿದ ಶ್ರೀಮದ್ವಾದಿ ರಾಜತೀರ್ಥ ಗುರುಗಳು ಸುಮಾರು ನೂರು ವರ್ಷಗಳ ಹಿಂದೆ ಇದ್ದರು ಇವರು ಶ್ರೀ ವ್ಯಾಸರಾಯ ಸ್ವಾಮಿಗಳಲ್ಲಿ (೧೫೩೫) ಓದಿದಂತೆಯೂ (೧೬೦೭) ರಲ್ಲಿ ಗತಿಸಿದಂತೆಯೂ ಗೊತ್ತಾಗಿರುವದು. ಅವರು ಋಜುಗಣಸ್ಥರ ಅಂಶವೆಂದು ತಿಳಿಪಡೆ,

ಈ ಮಹಾನುಭಾವರು ಶಿರ್ಸಿಪ್ರಾಂತದಲ್ಲಿ ದಿಗ್ವಿಜಯ ಮಾಡುವಾಗ ಅಲ್ಲಿ ರುವ ಜೈನ-ಶೈವಾದಿ ಮಠಾಧಿಪತಿಗಳಾದ ಸನ್ಯಾಸಿಗಳಿಗೂ ಇವರಿಗೂ ವಾದವಿವಾ ದವು ನಡೆಯಲು—ಗೆದ್ದವರಿಗೆ ಸೋತವರು ತಮ್ಮ ಸರ್ವಸ್ವವನ್ನೂ ಕೊಡತಕ್ಕ

ಸ್ವಾಮಿಾ ಯಾರಿಗೂ ಹೇಳಬಾರದೆಂದು ಭಗವಂತನ ಅಪ್ಪಣೆಯಾಗಿದೆ. ಆದರೂ ಗುರುಗಳಲ್ಲಿ ಸುಳ್ಳಾಡಲು ಶಕ್ಯನಲ್ಲ. ನನ್ನಲ್ಲಿ ಅರವತ್ತು ಆಭರಣಗಳಿವೆ. ಮೂವತ್ತು ರೂಪಾಯಿ ಕೊಟ್ಟಿದ್ದೇನೆ. ಎಂದು ಹೇಳಿದನು. ಮೊದಲು ನಗುತ್ತಿದ್ದವರು ಈಗ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಕನಕನು ಮಹಾತ್ಮನೆಂದು ತಿಳಿದರು. ವೈಕುಂಠನು ಕನಕನಲ್ಲಿ ಅತ್ಯಂತ ಪೂಜ್ಯಭಾವವನ್ನು ತಾಳಿ ರೂಪಾಯಿಗಳನ್ನು ಇಸಗೊಳ್ಳದೆ ಆಭರಣಗಳನ್ನೆಲ್ಲ ಶ್ರೀಗಳವರ ಪಾದಕ್ಕೆ ತಂದೊಪ್ಪಿಸಿದನು.

ಉತ್ತಮಗುಣನಿಧಿವಿಜಯವಿಠಲರಾಯ | ಪೆತ್ತಜನಕನಂತೆ
ಇರಳು ಹಗಲು ಇದ್ದು | ತುತ್ತು ಮಾಡಿ ತಂದು ಉಣಿಸುವದು ಸತ್ಯವೊ||
ಎಂಬ ಮಾತು ಸುಳ್ಳಲ್ಲ.

ಮರುದಿವಸ ಶ್ರೀ ವಾದಿರಾಜಸ್ವಾಮಿಗಳವರು ಶ್ರೀ ಕೃಷ್ಣನ ಪೂಜೆಗೆ ಕುಳಿತುಕೊಂಡರು. ಪೂಜೆಯಲ್ಲ ಮುಗಿಯಿತು. ನೈವೇದ್ಯದ ಸಮಯ. ಒಳಗೆ ಪಂಚಭಕ್ಷ್ಯ ಪರಮಾನ್ನಗಳು ಸಿದ್ಧವಾಗಿದ್ದವು. ಇನ್ನೂ ನೈವೇದ್ಯವನ್ನು ತಂದಿರಲಿಲ್ಲ. ಅದೇ ಗಡಿಬಿಡಿಯಲ್ಲಿದ್ದರು. ಅಷ್ಟರಲ್ಲಿ ಎದುರಿಗೆ ಕುಳಿತ ಶ್ರೀಗಳವರಿಗೆ—

---

ದ್ದೆಂದು ಗೊತ್ತಾಯಿತು ಆದರಂತೆ ಇವರು ಎಲ್ಲರನ್ನೂ ಗೆದ್ದು ಅವರ ವೈಭವವೆಲ್ಲನ್ನೂ ತಮ್ಮ ವಶ ಮಾಡಿಕೊಂಡಾಗ ಸೋದೆಯೂ ಇವರಿಗೆ ಸಿಕ್ಕಿತಂತೆ. ಇವೊತ್ತಿಗೂ ತಮ್ಮ ಜಯದ ಸ್ಮಾರಕವೆಂದು ಈ ಮಠದವರು ಬಸವಣ್ಣನ ಗಂಟೆ ಮಠದ ಗದ್ದಿಗೆಗಳನ್ನು ತಮ್ಮಲ್ಲಿಟ್ಟಿರುವರು.

ಸೋದೆಯಲ್ಲಿರುವ ತ್ರಿವಿಕ್ರಮ.ದೇವರ ಮೂರ್ತಿಯನ್ನು ಈ ಮಹಾನುಭಾವರೇ ಚಿಕ್ಕ ಬದರಿಯಿಂದ ತಂದು ಸ್ಥಾಪಿಸಿದರಂತೆ. ಮತ್ತು ಇವರು ತಮ್ಮ ತಪೋಬಲದಿಂದ ಭಾಗೀರಥಿಯನ್ನು ಪ್ರತ್ಯಕ್ಷ ಮಾಡಿಕೊಂಡು ಇಲ್ಲಿರುವ ಧವಳಗಂಗಾ ಎಂಬ ಸರೋವರದಲ್ಲಿ ನೆಲಸುವಂತೆ ಮಾಡಿದರು.

ಇವರು—ವೈಕುಂಠವರ್ಣನೆ, ಸ್ವಪ್ನಗದ್ಯ, ಲಕ್ಷ್ಮೀಯ ಶೋಭಾನೆ, ಭಾರತ ತಾತ್ಪರ್ಯ ನಿರ್ಣಯಟೀಕೆ ಮೊದಲಾದ ಕನ್ನಡ ಗ್ರಂಥಗಳನ್ನು ಬರೆದಿದ್ದಾರೆ. ಸಂಸ್ಕೃತದಲ್ಲಂತೂ ಎಷ್ಟೋ ಬರೆದಿರುವರು.

ಗೀರ್ವಾಣ ಭಾಷೆಯಲ್ಲಿದ್ದ ಮತಗ್ರಂಥಗಳನ್ನು ಕನ್ನಡ (ಪ್ರಾಕೃತ) ಭಾಷೆಗೆ ಟೀಕಿಸ ಕೊಡದೆಂದು ಆಗ್ರಹ ಪಡುವ ಜನರನ್ನು ದೂರೀಕರಿಸಿ, ಎಲ್ಲರಿಗೂ ಮೇಲು ಪಂಕ್ತಿಯನ್ನು ಹಾಕಿಕೊಟ್ಟು ಕನ್ನಡಿಗರ ಮೇಲೆ ಮಹದುಪಕಾರ ಮಾಡಿದವರಲ್ಲಿ ಇವರು ಶ್ರೇಷ್ಠರೆಂತು ಹೇಳಬಹುದು.

ತಮ್ಮ ಸ್ವಾಮಿಯು ಕರಾರವನ್ನು ಬಾಗಿಸಿದ ಗಂಜಿಯನ್ನು ಚಿಪ್ಪಿನಲ್ಲಿ ಹಾಕಿ ಕೊಂಡು ಕುಡಿಯುತ್ತಿರುವಂತೆ ತೋರಿತು. ಅವರು ಇದೇನೆಂದು ಜ್ಞಾನದೃಷ್ಟಿ ಯಿಂದ ನೋಡಿದರು. ಹೊರಗೆ ಕನಕನು ಮಾನಸಪೂಜೆಮಾಡಿ ನೈವೇದ್ಯವನ್ನು ಅರ್ಪಿಸಿರುತ್ತಾನೆಂದು ತಿಳಿಯಿತು. ಕೂಡಲೆ ಶ್ರೀಗಳವರು —ಕನಕನು ಕರಾರ ಮಹಾನೈವೇದ್ಯವನ್ನು ಅರ್ಪಿಸಿರುವನು, ಬೇರೆ ಮಹಾನೈವೇದ್ಯವನ್ನು ತೆಗೆದು ಕೊಂಡು ಬರ್ರಿ, ಎಂದು ಶಿಷ್ಯರಿಗೆ ಹೇಳಿದರು, ಶಿಷ್ಯರಿಗೆ ಇದು ಹೇಗೆ ತಿಳಿಯ ಬೇಕು? ತಿಳಿಯಲಿಲ್ಲ ಹಾಗೆಂದರೇನೆಂದು ಕೇಳಿದರು ಕನಕನು ಈ ಮೊದಲೇ ಬಾಗಿಸಿದ ಗಂಜಿಯನ್ನು ಚಿಪ್ಪಿನಲ್ಲಿ ಹಿಡಿದು ಅರ್ಪಿಸಿರುತ್ತಾನೆ, ಎಂದು ಶ್ರೀಗಳವರ ನುಡಿಯಲು, ಎಷ್ಟೋ ಜನರು ಹೊರಗೆ ಹೋಗಿ ನೋಡಿದರು. ಆತನು ಹಾಗೆಯೇ ಮಾಡಿದ್ದನು ಎಲ್ಲರಿಗೂ ಪರಮಾಶ್ಚರ್ಯವೆನಿಸಿತು. ಶ್ರೀಗಳವರಂತೂ ಕನಕನಲ್ಲಿ ವಿಶೇಷ ಪ್ರೀತಿಯನ್ನಿಟ್ಟು ಗೌರವಿಸಹತ್ತಿದರು. ಧನ್ಯನು! ಕನಕಪ್ಪನು ಪರಮ ಧನ್ಯನು!! ಅಂತೆಯೇ ಜಗನ್ನಾಥದಾಸರಾಯರು —

ನಿನ್ನ ಸರ್ವತ್ರದಲಿ ನೆನೆವವ | ರನ್ಯ ಕರ್ಮವ ಮಾಡಿದರು ಸರಿ |
ಪುಣ್ಯಕರ್ಮಗಳೆನಿಸುವವು ಸಂದೇಹವಿನಿತಿಲ್ಲ ||
ನಿನ್ನ ಸ್ಮರಿಸದೆ ಸ್ನಾನ ಜಪ ಹೋ | ಮಾನ್ನ ವಸ್ತ್ರ ಗಜಾಶ್ವ ಭೂ ಧನ |
ಧಾನ್ಯ ಮೊದಲಾದಖಿಳ ಧರ್ಮವ ಮಾಡಿ ಫಲವೇನು || ೧ ||

ಎಂಬದಾಗಿ ಹೇಳಿಕೊಂಡಿದ್ದಾರೆ. ಸತ್ಪುರುಷರ ಬೆಲೆಯು ಸತ್ಪುರುಷರಿಗೇ ಸಿಗುವ ದಲ್ಲದೆ, ಇತರರಿಗೆ ದುರ್ಲಭವಾಗಿರುವದು.

ಕನಕಪ್ಪನು ಈ ರೀತಿ ಬಾಗಿಸಿದ ಗಂಜಿಯನ್ನೂ, ಹಸಿ ಹಿಟ್ಟಿನ ರೊಟ್ಟಿ ಯನ್ನೂ ದೇವರಿಗೆ ಅರ್ಪಿಸಿ, ಆತನ ಅನುಗ್ರಹವನ್ನು ಪಡೆದಕಾರಣ ಉಡುಪಿಯೊಳಗೆ ಮಹಾನೈವೇದ್ಯದ ಸಂಗಡ ಈಗಲೂ ಬಾಗಿಸಿದ ಗಂಜಿ, ಹಸಿ ಹಿಟ್ಟಿನ ರೊಟ್ಟಿಗ ಳನ್ನು ಅರ್ಪಿಸುವ ಸಾಂಪ್ರದಾಯವು ಬಿದ್ದಿದೆ.

ಭಕ್ತರೆಂದರೆ ಭಗವಂತನಿಗೆ ಇಷ್ಟೊಂದು ಜೀವ. ಅವರು ಭಕ್ತಿಯಿಂದ ಏನನ್ನು ಕೊಟ್ಟರೂ ಅದನ್ನು ಸ್ವೀಕರಿಸಿ ಬಿಡುವನು. ಅದೇ ಭಕ್ತರಲ್ಲದವರು ಮೃಷ್ಟಾನ್ನವನ್ನಿತ್ತರೂ, ಕಡೆಗಣ್ಣಿನಿಂದ ನೋಡುವದಿಲ್ಲ. ಅದರಿಂದಲೇ ದಾಸರು ಹೀಗೆ ಹೊಗಳಿರುವರು — ( ಸು ಳಾ ದಿ )

ನಿತ್ಯ ಭಕುತಿಯಿಲ್ಲದವನು | ಹತ್ತಿಲಿ ಪದಾರ್ಥವು | ಜತ್ತಾಗಿ ಇರಿಸಿಕೊಂ-
ಡು | ಸುತ್ತಿ ಸಮರ್ಪಣೆಯೆಂದು ಇತ್ತು ನಲಿದಾಡಿದರು | ಉತ್ತಮ ಶ್ಲೋ-

ಕನು ಒಪ್ಪಾ | ಚಿತ್ತ ಶುದ್ಧದಲ್ಲಿ ಕರವನೆತ್ತಿ ಬಲು ದೀನನಾಗಿ | ಎತ್ತಲಿದ್ದ ಉದಕದಿ | ಅತ್ತಲರ್ಪಿತವೆನಲು | ಚಿತ್ತಜಪಿತನು ಮೆಚ್ಚಿ | ಚಿತ್ತದಲಿ ಒಪ್ಪಗೊಂಡು ಹತ್ತಕ್ಕೆ ನೂರಾರು ಮಾಡಿ ಬೆಳಿಸಿ ಉಣಿಸುವ | ಇತ್ತಬರುವ ಭವದೂರಾ ವಿಜಯವಿಠಲರಾಯ | ಎತ್ತಲಾದರೇನು ತನ್ನ ಭೃತ್ಯನೆಂದರೆ ಒಡಂಬಡುವಾ ||

ಅಚ್ಯುತಗರ್ಪಿತವೆಂದು ದಾಸರೆನ್ನಲು | ಕಲಗಚ್ಚು ಕುಡಿದ ಕಾಣೊ ವಿಜಯ ವಿಠಲ ಮೆಚ್ಚಿ || (ವಿಜಯದಾಸರು)

---

## ೭ನೆಯ ಕಥೆ.



## ಮೀನುಗಳನ್ನು ಹೂವು ಮಾಡಿ ತೋರಿಸಿದ್ದು.

ಉಡಿಪಿಯೊಳಗೆ ಶ್ರೀ ವಾದಿರಾಜ ಸ್ವಾಮಿಗಳವರು ಕನಕನ ಮೇಲೆ ತೋರಿಸುತ್ತಿದ್ದ ಅತ್ಯಂತ ಪ್ರೇಮವನ್ನು ನೋಡಿ ಅಲ್ಲಿಯ ಮಠಿಕರು ಹೊಟ್ಟೆಕಿಚ್ಚುಪಡಹತ್ತಿದರು. ಯಾವನೋ ಒಬ್ಬ ಕಮ್ಮಿ ಕುಲದವನ ಸಂಗಡ ಇಷ್ಟು ಸಖ್ಯವನ್ನು ಬೆಳಿಸುವದು ತೀರ ಅಯೋಗ್ಯವೆಂದು ಅಲ್ಲಿಯ ಶಬ್ದ ಬ್ರಹ್ಮರಾದ ಪಂಡಿತರು ನಿರ್ಣಯಿಸಿದ್ದರು. ಹೇಗಾದರೂ ಮಾಡಿ ಕನಕನನ್ನು ಅಪಮಾನ ಮಾಡುವದೇ ಅವರ ಮುಖ್ಯ ಕೆಲಸವಾಗಿತ್ತು. ಕನಕನು ಕೇವಲ ಹರಿಭಕ್ತನೆಂದೂ ಅವನ ಅಪಮಾನ ಮಾಡುವದೆಂದರೆ ದೇವರ ಅಪಮಾನವನ್ನೇ ಮಾಡಿದಂತಾಗುವದೆಂದೂ ಆ ಮಂದಬುದ್ಧಿಗಳಿಗೆ ತಿಳಿಯಲಿಲ್ಲ. ತಮ್ಮ ಕಾರ್ಯದಲ್ಲಿಯೇ ಆಸಕ್ತರಾದರು. ಇದೊಂದು ಲೋಕದ ಸ್ವಭಾವ. ಅತ್ತ ಕನಕನೂ ತನ್ನ ಸ್ವಾಮಿಯ ಸೇವೆಯಲ್ಲಿ ನಿರತನಾಗಿದ್ದನು. ಆತನಿಗೆ ಯಾವ ಚಿಂತೆಯೂ ಇಲ್ಲ. ಇವರು ಹೊಟ್ಟೆಕಿಚ್ಚುಪಡುತ್ತಿರುವರೆಂಬ ಅಂಜಿಕೆಯೂ ಇಲ್ಲ. ಎಲ್ಲವನ್ನೂ ಶ್ರೀ ಕೃಷ್ಣನಿಗೆ ಅರ್ಪಿಸಿಬಿಟ್ಟಿದ್ದನು. ಅಂದಮೇಲೆ ಯಾರದೇನು ಭಯ! ಹೀಗೆ ನಡೆಯುತ್ತಿರುವಾಗ ಒಂದಾನೊಂದು ದಿವಸ ಇಂಥ ಚಮತ್ಕಾರವಾಯಿತು. ಕನಕನು ಸಮುದ್ರದ ಕಡೆಯಿಂದ ತಿರುಗಿ

ಬರುತ್ತಿದ್ದನು. ಹೆಗಲಿಗೆ ಒಂದು ಅರಿವೆಯ ಗಂಟು ಇತ್ತು. ಮಠದ ಸಮೀಪ ವಾಗಿಯೇ ಹಾದು ಹೋಗುತ್ತಿದ್ದನು. ಮೊದಲೇ ಇವನ ಮೇಲೆ ಮತ್ಸರ ಪಡು ತ್ತಿದ್ದ ಮಠಿಕರು ಇದೇ ಸಮಯವೆಂದು ಸ್ವಾಮಿಗಳವರಿಗೆ ತಿಳಿಸಿದರು.— "ಸ್ವಾಮಿ! ಕನಕನು ಕೇವಲ ಹರಿಕಿಂಕರನೆಂದು ಅವನಿಗೆ ಮನ್ನಣೆ ಮಾಡುತ್ತಿರು ವಿರಿ. ಇಕೋ ಈಗ ಇಲ್ಲಿಯೇ ಹೋಗುತ್ತಾನೆ. ಕರಸಿ ನೋಡೋಣತಗಲಿ. ಅವನ ಹತ್ತಿರ ಸದ್ಯಕ್ಕೆ ಮಾಂಸಗಳಿರುವವು. ಇಂಥ ಶ್ವಪಚನನ್ನು ತಾವು ಇಷ್ಟು ಏರಿಸಿದ್ದು ಯೋಗ್ಯವೋ ಆಯೋಗ್ಯವೋ ತಾನೇ ತಿಳಿದು ಹೋಗುವದು. ನಮ್ಮ ಮಾತಿನಲ್ಲಂತೂ ತಮಗೆ ನಂಬಿಕೆಯಿಲ್ಲ. ಪ್ರತ್ಯಕ್ಷ ನೋಡಿದ ಮೇಲಾದರೂ ನಮ್ಮ ಮಾತಿನ ಮೇಲೆ ವಿಶ್ವಾಸವಿಡಬಹುದು.''

ಶ್ರೀಗಳವರು ಅವರ ಮಾತು ಕೇಳಿ ನಕ್ಕು ಬಿಟ್ಟರು. ಆದರೂ ಕನಕನ ಮಹಿಮೆಯನ್ನು ತೋರಿಸಬೇಕೆಂದು ಮನಸ್ಸು ಮಾಡಿ ಆತನನ್ನು ಕರೆಯಿಸಿ— 'ಎಲೋ ಕನಕಾ ಹೆಗಲಿಗೆ ಹಾಕಿದ ಗಂಟಿನಲ್ಲಿ ಏನು ಕಟ್ಟಿದ್ದೀಯೋ ನಮ್ಮೆದುರಿಗೆ ಬಿಚ್ಚಿ ತೋರಿಸು' ಎಂದು ಹೇಳಿದರು. ಓ ವಾಚಕವರ! ಸತ್ಯವನ್ನೇ ಹೇಳಬೇಕೆಂ ದರೆ ಕನಕನ ಗಂಟಿನಲ್ಲಿ ಆಗ ನಿಜವಾಗಿ ಮಾಂಸಗಳೇ ಇದ್ದವು. ಮಠಿಕರು ಇದರ ಅಂತರ್ಯವನ್ನೆಲ್ಲ ತಿಳಿದೇ ಸ್ವಾಮಿಗಳಿಗೆ ಸೂಚಿಸಿದ್ದರು. ಈಗಂತೂ ಸುತ್ತು ವರಿದು ನೆರೆದು ಬಿಟ್ಟಿದ್ದರು. ಕನಕನ ಕಳವನ್ನು ಬೈಲಿಗೆ ಹಾಕಿದೆವೆಂಬುದೊಂದು ಅವರಿಗೆ ಹಿಡಿಸಲಾರದಷ್ಟು ಸಂತೋಷ. ವಾಚಕಮಹಾಶಯ! ನೀವು ಮಾತ್ರ ಇಂಥ ಸಂತೋಷದಲ್ಲಿ ಪಾಲುಗಾರರಾಗಬೇಡಿರಿ. ಯಾಕಂದರೆ ದೇವರು ತನ್ನ ಭಕ್ತರನ್ನು ಯಾವ ರೀತಿಯಿಂದಾದರೂ ಸಂರಕ್ಷಿಸದೆ ಬಿಡುವದಿಲ್ಲ. ಸತ್ಯ. ಸತ್ಯ. ಇದು ನಿಮ್ಮ ನೆನಪಿನಲ್ಲಿರಲಿ.

ಈ ಪ್ರಕಾರ ಶ್ರೀಗಳವರು ಕರೆಸಿ ಕೇಳಿದ ಕೂಡಲೆ ಕನಕನಿಗೆ ತಿಳಿದು ಹೋ ಯಿತು, ನನ್ನ ಮರ್ಯಾದೆ ತೆಗೆದುಕೊಳ್ಳುವ ಸಲುವಾಗಿಯೇ ಮಠಿಕರು ಈ ತಂತ್ರವನ್ನು ಮಾಡಿರುವರೆಂಬದು; ಆದರೆ ಆತನ ಮನಸ್ಸು ಇನ್ನೆಷ್ಟು ದೃಢವಾದ ದ್ದೋ ತಿಳಿಯದು. ಕೂಡಲೆ ಶ್ರೀಗಳವರಿಗೆ ನಮಸ್ಕಾರ ಹಾಕಿ ಹೇಳಿದನು:— 'ಸ್ವಾಮಿ, ಇದು ಮತ್ತೇನೂ ಅಲ್ಲ. ದೇವರಿಗೆ ಮಾಲೆಯನ್ನು ಅರ್ಪಿಸಬೇಕೆಂದು ಹೂವುಗಳನ್ನು ತಂದಿದ್ದೇನೆ. ಬೇಕಾದರೆ ನೋಡಿಕೊಳ್ಳಿರಿ' ಅಹಹಾ! ಪ್ರತ್ಯಕ್ಷ ಮಾಂಸಗಳನ್ನು ತಂದಿದ್ದು ಹೂವೆಂದು ಹೇಳಿ ಬಿಚ್ಚಿ ತೋರಿಸುವಾಗ ತುಸುವಾದರೂ ಅನುಮಾನ ಮಾಡಿದನೇ? ಮೋರೆಯನ್ನು ಕೆಳಗೆ ಮಾಡಿದನೇ? ಇಲ್ಲ ಇಲ್ಲ

ಅಂಥ ಅನುಮಾನಗಳು ಆತನ ಮನಸ್ಸಿನಲ್ಲಿ ಇಲ್ಲವೇ ಇಲ್ಲ. ಹೃದಯದಲ್ಲಿದ್ದ ಪರಮಾತ್ಮನೇ ಹೂವೆಂದು ಒಡನುಡಿಸಿದ ಮೇಲೆ ಅದು ಸುಳ್ಳಾಗಲಾರದೆಂಬುದು ಅವನ ದೃಢವಾದ ನಂಬುಗೆ. ಭಗವಂತನಲ್ಲಿ ಇಂತಹ ಅಪಾರವಾದ ನಂಬುಗೆಯನ್ನಿಟ್ಟ ಮೇಲೆ ಆತನು ಕೈ ಬಿಡಬಹುದೇ? ಅದೆಂದಿಗೂ ಆಗಲಾರದು. ಕನಕನ ಗಂಟು ಬಿಚ್ಚಿ ನೋಡುತ್ತಾರೆ ಕೃಷ್ಣನ ಸಮರ್ಪಣೆಗೆ ಯೋಗ್ಯವಾದ ಹೂವುಗಳು! ಆಗ ಸ್ವಾಮಿಗಳವರು ಮರಿಕರ ಮೋರೆ ನೋಡಿದರು. ಮರಿಕರೇನು ಮಾತಾಡುವರು? ಮೋರೆ ತಗ್ಗಿಸಿದರು. ಬಾಯಿಂದ ಮಾತುಗಳು ಹೊರಡಲಿಲ್ಲ ಆದರೂ ಮನಸ್ಸಿನೊಳಗಿನ ಕಲ್ಮಷವು ಪೂರ್ಣವಾಗಿ ಹೋಗಲಿಲ್ಲ. ಇವನು ಏನೋ ಕಣ್ಣುಕಟ್ಟು ಮಾಡಿರಬೇಕೆಂದು ಯೋಚಿಸಹತ್ತಿದರು. ಸಂಶಯಪಿಶಾಚಿಗಳ ಮಾತೇ ಹೀಗೆ. ಅತ್ತ ಕನಕನಿಗಾದ ಸಂತೋಷವನ್ನು ಹೇಳಲಸಾಧ್ಯ. ದೇವರು ತನ್ನ ಮಾತನ್ನು ನಡೆಸಿದನೆಂದು ಆತನಿಗೆ ಆನಂದಬಾಷ್ಪಗಳುದುರಹತ್ತಿದವು, ಮನಸ್ಸಿನಲ್ಲಿಯೇ ದೇವರನ್ನು ಪರಿಪರಿಯಿಂದ ನುತಿಸಿದನು ಸ್ವಾಮಿಗಳವರು ಕನಕನ ಭಕ್ತಿಗೆ ಮೆಚ್ಚಿ ಆತನನ್ನು ಮನ್ನಿಸಿ ಕಳಿಸಿದರು. ಭಕುತರಿಗಾಗಿ ದೇವರು ಏನೇನು ಮಾಡುತ್ತಾನೆಂಬುದನ್ನು ಹೇಳಲಿಕ್ಕೆ ಒರುವಂತಿಲ್ಲ. ಆದುದರಿಂದಲೇ ಒಬ್ಬ ದಾಸರು ಹೀಗೆ ಅಂದಿರುವರು.

ಭಕುತರ ಮನೋರಥ ಪೂರ್ಣಮಾಡುವಲ್ಲಿ ಉತ್ಕೃಷ್ಟವಾದ ಕಾಮಧೇನುವು ನೀನೆ | ಭಕುತರ ಅಪರಾಧ ಸಹನ ಮಾಡುವಲ್ಲಿ ಧರಿತ್ರಿಗೆ ಸಮನೆನಿಪೆ ಸಾರ್ವಭೌಮಾ | ಭಕುತರ ಮೇಲೆ ಮಹಾ ಕರುಣಾ ಪಿತೃ-ಮಾತೃ-ಭ್ರಾತೃ ಮತ್ತೆ ಗುರು ಸಮನೆನಿಪೆ | ಭಕುತರ ಅಭಿಮಾನ ಪಿಡಿವಲ್ಲಿ ಮಿತ್ರನೆನಿಸಿಕೊಂಬೆ ಅನಿಮಿತ್ತ ಬಂಧು | ಭಕುತರ ದುರಿತಕಳಿದು ಕಾವವಿಷಯದಲ್ಲಿ ಪುತ್ರನೆನಿಪೆ ಸತತಸನ್ಮಂಗಳಾಂಗ | ಭಕುತರ ನಿಂದಕರ ನಿಗ್ರಹ ಮಾಡುವಲ್ಲಿ ಮೃತ್ಯುಯಮ ಸದೃಶನೆನಿಪೆ ದೇವಾ | ಭಕ್ತವತ್ಸಲಗುರುವಿಜಯ ವಿಠಲರೇಯ ಭಕುತರ ಪೊರೆವ ಬಿರುದು ನಿನ್ನದಯ್ಯಾ ||೧||

(ವಿಜಯದಾಸರು.)

ಭಕುತರಿಗಾಗಿ ನೀಜಗವಸೃಷ್ಟಿಸಿದೆಯ್ಯ | ಭಕುತರಿಗಾಗಿ ನೀ ಅವತಾರಮಾಡಿದಿ|
ಭಕುತರು ನಿನ್ನನು ಭಜಿಸದಿದ್ದರೆ ದೇವಸಕಲರು ನಿನ್ನರುಹರೆಂತೊ ||

(ಭಾಗಣ್ಣದಾಸರು.)

# ೮ನೆಯ ಕಥೆ.



## ಮದ್ಯವನ್ನು ಜೇನುತುಪ್ಪವಾಗಿ ಮಾಡಿದ್ದು.

ಮುಂದೆ ಕೆಲವು ದಿವಸಗಳು ಕಳೆದವು. ಮಠಿಕರಿಗೆ ಸರ್ವದಾ ಕನಕನ ಯೋಚನೆ. ಕನಕನ ಬೆನ್ನ ಮೇಲೆ ಕೃಷ್ಣನಿರುತ್ತಾನೆಂಬುದು ಅವರಿಗಿನ್ನೂ ತಿಳಿದಿರಲಿಲ್ಲ. ಅಂಥ ಅಭಿಮಾನ! ಅಂಧ ಪಾಂಡಿತ್ಯದ ಹೆಮ್ಮೆ!!

ಮತ್ತೊಂದು ದಿನ ಕನಕನು ಮದ್ಯ(ಶರೆ)ವನ್ನು ತೆಗೆದುಕೊಂಡು ಹೋಗುತ್ತಾನೆಂದು ಶ್ರೀಗಳವರೆದುರಿಗೆ ದೂರಿದರು. ಆಗಲೇ ಕನಕನು ಕರೆಯಿಸಲ್ಪಟ್ಟನು. ನಿನ್ನ ಕೈಯೊಳಗಿನ ಪಾತ್ರೆಯಲ್ಲಿರುವದೇನೆಂದು ಕೇಳಿದರು ದೇವರ ನೈವೇದ್ಯಕ್ಕೆ ಬೇಕಾದ ಜೇನುತುಪ್ಪವಿದೆಯೆಂಬ ಶಬ್ದ ತಟ್ಟನೆ ಅವನ ಬಾಯಿಂದ ಹೊರಟಿತು. ಈ ಸಾರೆ ಹೇಗೆ ಪಾರಾಗುವನೋ ನೋಡಿ ಬಿಡೋಣವೆಂದು ಮಠಿಕರು ಮೊದಲೇ ಅವನಮೇಲೆ ಪೂರ್ಣ ಕಣ್ಣಿಟ್ಟಿದ್ದರು; ಆದರೆ ಪರಮಾತ್ಮನ ಮಾಯೆಗೆ ಇವರು ಯಾವ ಗಿಡದ ತೊಪ್ಪಲು? ಪರೀಕ್ಷಿಸಿ ನೋಡುವಲ್ಲಿ ಕೈಯೊಳಗಿನ ಪಾತ್ರೆಯೊಳಗೆ ನಿಜವಾಗಿಯೂ ಜೇನುತುಪ್ಪವಿದ್ದಿತು. ಆಗ ಮಠಿಕರೂ, ನೆರೆದವರೂ ಗಲ್ಲ ಗಲ್ಲ ಬಡಿದುಕೊಂಡರು. ಸತ್ಪುರುಷರ ಪರೀಕ್ಷೆ ಮಾಡಹೋಗುವವು ತಪ್ಪೆಂದು ಒಪ್ಪಿಕೊಂಡರು. ಕನಕನು ಸಂತೋಷದಿಂದ ಕೃಷ್ಣಮೂರ್ತಿಯನ್ನೇ ಧ್ಯಾನ ಮಾಡಿದನು.

ದೇವರಿಗೆ ಪ್ರಿಯನಾದವನು ಎಲ್ಲರಿಗೂ ಪ್ರಿಯವಾಗುವನು.
ಅಂತೆಯೇ ಹರಿದಾಸರೊಬ್ಬರು ಹೀಗೆ ಹೇಳಿಕೊಂಡಿದ್ದಾರೆ:—

"ಇಂದಿರೇಶನು ಅವರ ಮುಂದೆ ಕುಣಿವನೊ | ಅಂದ ವಚನವ ನಿಜಕೆ ತಂದುಕೊಡುವನೊ ||"

ಈ ಮಾತು ಸುಳ್ಳಲ್ಲ.

ಏನು ಕರುಣವೊ ತನ್ನವರಲಿ ದಯಾನಿಧಿಗೆ ಸದ್ಭಕ್ತಜನರತಿ |
ಹೀನಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವಾ ||

(ಜಗನ್ನಾಥದಾಸರು)

## ೮ನೆಯ ಕಥೆ.

## ಪರಮಾತ್ಮನಿಗೆ ಪಾರಣೆ ಮಾಡಿಸಿದ್ದು

ಈ ರೀತಿ ಕನಕನು ಸ್ವಾಮಿಗಳವರಿಂದ ಆದರ ಹೊಂದಿ ಉಡುಪಿಯಲ್ಲಿರುತ್ತಿರಲು, ಒಂದಾನೊಂದು ಹರಿದಿನದಲ್ಲಿ ಸ್ವಾಮಿಯು ದಾಸನ ಮತ್ತೊಂದು ಲೀಲೆಯನ್ನು ತೋರಿಸಿದನು.

ಹರಿದಿನವಾದ್ದರಿಂದ ಈ ಹೊತ್ತು ವೈಷ್ಣವರೆಲ್ಲರೂ ಉಪೋಷಣ (ನಿರಾಹಾರ) ಗಡಿಯಲ್ಲಿ ಶ್ರೀಗಳವರು ಕೃಷ್ಣಮೂರ್ತಿಯ ಪೂಜೆಯನ್ನು ಮಾಡಿ ಮುಗಿಸಿದರು. ಎಲ್ಲರಿಗೂ ತೀರ್ಥ ದೊರೆಯಿತು. ಬ್ರಾಹ್ಮಣರನೇಕರು ಪುರಾಣಶ್ರವಣದಲ್ಲಿ-ಪಾರಾಯಣದಲ್ಲಿ-ಹರಿಕೀರ್ತನದಲ್ಲಿ ಮಗ್ನರಾದರು. ಸಂಜೆಯಾಯಿತು. ಸಾಯಂಕಾಲದ ಮಂಗಳಾರತಿಯೇ ಮೊದಲಾದ ಕಾರ್ಯಗಳು ಜರುಗಿದವು. ಎಲ್ಲ ಜನರೂ ಮನೆಗೆ ಹೊರಟುಹೋದರು. ಕನಕನು ಎಲ್ಲಿಗೆ ಹೋಗಬೇಕು? ಇವನ್ಯಾಗಿ ಆ ಹೊತ್ತು ಹರಿದಿನ ಬೇರೆ "ಮೊದಲೇ ಉಲ್ಹಾಸ, ಆದರಲ್ಲಿ ಫಾಲ್ಗುಣಮಾಸ" ಎಂಬಂತೆ ಮೊದಲೇ ಪರಮಭಕ್ತನಾಗಿದ್ದ ಕನಕನಿಗೆ ಅಂದು ವಿರಾಮವೆಂಬುದೇ ಇಲ್ಲ. ದಿನಾಲು ಆರಾರು ತಾಸು ರಾತ್ರಿಯವರೆಗೂ ದೇವರನ್ನು ತುತಿಸುವವನು ಹರಿದಿನದಲ್ಲಿ ಎಂದಿಗಾದರೂ ಸುಖವಾಗಿ ಮಲಗಿ ನಿದ್ದೆ ಮಾಡಬಹುದೇ? ಎಲ್ಲರೂ ಮನೆಗೆ ಹೋದಕೂಡಲೆ ದೇವರೆದುರಿಗೆ ಜಾಗರಕ್ಕೆ ಪ್ರಾರಂಭಮಾಡಿದನು. ಹಾಡುವದೂ, ಕುಣಿಯುವದೂ ಎಷ್ಟಾದರೂ ಅವನಿಗೆ ತೃಪ್ತಿಯೇ ಇಲ್ಲ. ಮನಸ್ಸೆಲ್ಲವೂ ದೇವರಲ್ಲಿ ಸೇರಿಹೋಗಿತ್ತು. ದೇವರೂ ಈತನ ಸಂಗಡ ಕುಣಿಯಹತ್ತಿದನು. ಭಕ್ತರೆಂದರೆ ಭಗವಂತನಿಗೆ ಅಷ್ಟೊಂದು ಜೀವ. ಹೀಗಿದ್ದರೂ ನಾವು ದೇವರನ್ನು ಒಂದೇ ಒಂದು ಸಾರೆಯಾದರೂ ಕಾಣಲೊಲ್ಲೆವೇಕೆ? ಸಂಸಾರದಲ್ಲಿ ಇಷ್ಟು ಬಳಲುತ್ತಿರುವೆವೇಕೆ? ಕನಕನ ಹತ್ತಿರ ಕುಣಿಯುತ್ತಿದ್ದ ಸ್ವಾಮಿಯು ನಮಗೆ ದರ್ಶನವನ್ನಾದರೂ ಸಹ ಕೊಡಕೂಡದೇಕೆ? ಭೋ ವಾಚಕಮಹಾಶಯ! ಕನಕನ ಭಕ್ತಿಗೂ, ನಮ್ಮ ಭಕ್ತಿಗೂ ಅಜಗಜಾಂತರ-ಕಡಲುಕಾಲುವೆಗಳಷ್ಟು ಹೆಚ್ಚು-ಕಡಮೆ. ಇಂಥದರಲ್ಲಿ ಆತನನ್ನು ಸರಿಗಟ್ಟಹೋಗುವದು ಎಲ್ಲಿಯ ನ್ಯಾಯ? ನಮ್ಮಂಥ ಪಾಮರರ ವಿಷಯ

ಹಾಗಿಯೇ ಒಬ್ಬ ಕನ್ನಡ ಕಬ್ಬಿಗನು ಎಂತಹ ಸುಂದರ ದೃಷ್ಟಾಂತವನ್ನು ಹೇಳಿ ದ್ದಾನೆ ನೋಡಿರಿ!

ಮಾಧವಗೆ ಹರಿನಾಮ ವೆನಗೆಯುಂ ಹರಿನಾಮ |
ಮಾಧವಗೆ ಜಲಶಯನ ವೆನಗೆಯುಂ ಜಲಶಯನ |
ಮಾಧವನ ಪಿರಿದೇನು ಎನ್ನ ಕಿರಿದೇನೆನುತ ಕಪ್ಪೆ ವಿಷ್ಣುವ ಜರೆವೊಲು ||
ಬಾಧಕರು ಹಸಿವು ತೃಷೆ ನಿದ್ರೆ ಜನನಂ ಮರಣ |
ಪೀ ಧರಿತ್ರಿಯೊಳಿಮಗೆ ನಿಮಗೆ ಸರಿಯುದರಿ ನಿಂ |
ದಾದುದೇಂ ನಿಮಗೆ ದೇವತ್ವವೆಂದೆನುತ ಪೊಳೆವಾತುಗಳ ಸೊರಹುತಿಹರೂ ||

ಹೀಗೆ ಬರಬರುತ್ತ ಭಕ್ತಿಯು ಲುಪ್ತವಾಗುತ್ತ ನಡೆದು ಬರೀ ನಾಮಧಾರಕರಾಗ ಹತ್ತಿದ್ದೇವೆ. ಇದರಿಂದೇನು ಪ್ರಯೋಜನ?

ನಾಲ್ಕು ಹೊಡೆಯುವ ಸುಮಾರಿಗೆ ಕನಕನು ಜಾಗರವನ್ನು ಮುಗಿಸಿದನು. ದ್ವಾದಶೀ ಪಾರಣೆಯಾಗಬೇಕಲ್ಲವೇ? ಪಾರಣೆಗೆ ಕನಕನ ಹತ್ತರ ಏನಿದೆ? ಬಿಕ್ಷೆ ಬೇಡಿತಂದ ಒಂದು ಬೊಗಸೆಯಷ್ಟು ಹಿಟ್ಟುಮಾತ್ರ ಇತ್ತು. ಅದನ್ನೇ ಕಲಿಸಿ ಹಸಿ-ಬಿಸಿ ರೊಟ್ಟಿ-ಉಳ್ಳೀಗಡ್ಡಿಗಳನ್ನು ದೇವರಿಗೆ ಅರ್ಪಣಮಾಡಿಬಿಟ್ಟನು. ಆದರೇನು?

ಭಕ್ತಿವರ್ಜವಾಗಿ ತಂದ ಮುತ್ತು ರತ್ನ ಕೆಲಸವಿಲ್ಲ |
ಭಕ್ತಿಯಿಂದ ತಂದುದೊಂದು ಪತ್ರ ಪುಷ್ಪವೂ ||

ಎಂಬ ಪುರಂದರದಾಸರ ಹೇಳಿಕೆಯಂತೆ ಭಕ್ತನು ಭಕ್ತಿಯಿಂದ ಕೊಟ್ಟ ಆ ರೊಟ್ಟಿ-ಉಳ್ಳೀಗಡ್ಡಿ(ನೀರುಳ್ಳಿ)ಗಳೇ ಪರಮಾತ್ಮನಿಗೆ ಪಂಚಪಕ್ವಾನ್ನಗಳಾದವು. ಆತನು ಅದನ್ನೇ ಸೇವಿಸಿಬಿಟ್ಟನು. ಮುಂದೆ ತುಸ ಹೊತ್ತಿನಲ್ಲಿಯೇ ಶ್ರೀಗಳವರು ಶ್ರೀಕೃಷ್ಣನ ಪೂಜೆ ಮಾಡುವದಕ್ಕೆಂದು ಬಂದು ಬಾಗಿಲ ತೆರೆದು ನೋಡುತ್ತಾರೆ! ದೇವರ ಪಕ್ಕ ದಲ್ಲಿ ರೊಟ್ಟಿಯ ಚೂರೂ, ಉಳ್ಳೀಗಡ್ಡಿಗಳೂ ಬಿದ್ದಿದ್ದವು. ಅವರಿಗೆ ಅತೀವ ಸೋಜಿಗವಾಯಿತು. ಆಗಲೇ ತಿಳಿದುಕೊಂಡರು. ಕನಕನನ್ನು ಕರೆದು ದೇವರಿಗೆ ಈ ಹೊತ್ತು ಏನು ಪಾರಣೆ ಮಾಡಿಸಿರುವಿ? ಎಂದು ಕೇಳಿದರು. ಕನಕನು ಮಾಡಿ ದ್ದನ್ನೆಲ್ಲ ಗುರುಗಳೆದುರಿಗೆ ಹೇಳಿದನು. ಸಾವಿರಾರು ಜನರು ಬಂದು ಈ ಲೀಲೆ ಯನ್ನು ನೋಡಿ 'ಕನಕನೇನು ಧನ್ಯನೋ!' ಎಂದು ಆನಂದಪರವಶರಾದರು. ಆದ್ದ ರಿಂದಲೇ " ಮೋಕ್ಷಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ | " ಎಂಬ ದಾಗಿ ಶ್ರೀ ಶಂಕರಾಚಾರ್ಯರು ಕೂಗಿಕೊಂಡಿರುವರು.

---

## ೧೦ನೆಯ ಕಥೆ.



## ಕಣೆಯನ್ನು ಹೇಳಿದ್ದು.

ಕನಕನು ಉಡುಪಿಯಲ್ಲಿ ಈ ಪ್ರಕಾರ ಮಹಾತ್ಮ್ಯಗಳನ್ನು ತೋರಿಸಿ ಶ್ರೀ ವ್ಯಾಸರಾಯ ಗುರುಗಳ ಸನ್ನಿಧಿಗೆ ಬರಬೇಕೆಂದು ಸಂಚಾರ ಮಾಡುತ್ತ ಹೊರಟನು ಮಾರ್ಗದೊಳಗೆ ಒಂದು ಊರಲ್ಲಿ ಮಾರೆಮ್ಮನ ಜಾತ್ರೆಯು ನಡೆದಿತ್ತು. ಅಲ್ಲಿಗೆ ಹೋಗಿ ನೋಡಿದನು. ಎಷ್ಟೋ ಕುರಿ-ಕೋಣಗಳು ಬಲಿಯಾಗಿ ಬಿದ್ದಿದ್ದವು. ಇನ್ನೂ ಬೀಳುತ್ತಲಿದ್ದವು. ಅದನ್ನು ನೋಡಿ ಕನಕನಿಗೆ ಬಹಳ ದುಃಖವಾಯ್ತು. ವ್ಯರ್ಥವಾಗಿ ಜೀವಂತ ಪ್ರಾಣಿಗಳ ವಧೆ ಮಾಡುವರಲ್ಲಾ! ಎಂದು ಕಳವಳ ಪಟ್ಟನು. ಸತ್ಪುರುಷರ ಸ್ಥಿತಿಯೇ ಇಂಥಾದ್ದು. ''ವಸುಧೈವ ಕುಟುಂಬಕಂ'' ಎಂಬಂತೆ ಅವರು ಜಗತ್ತನ್ನೇ ತಮ್ಮ ಕುಟುಂಬವೆಂದು ಭಾವಿಸಿರುವರು. ಅಂತೆಯೇ ಅವರಿಗೆ ಪರರ ದುಃಖದಿಂದ ಕಣ್ಣೀರು ಉದುರುವವು. ಇಂಥವರು ಸುರರಲ್ಲದೆ ನರರಲ್ಲ. ಇರಲಿ.

ಕನಕಪ್ಪನು ಅಷ್ಟಕ್ಕೇ ಸುಮ್ಮನೆ ಕೂಡಲಿಲ್ಲ. ಈ ಸ್ಥಿತಿಯನ್ನು ಹೇಗಾದರೂ ಮಾಡಿ ಕಡಿಮೆ ಮಾಡಬೇಕೆಂದು ಯೋಚಿಸಿ —ಎಲೈ ಜನರುಗಳಿರಾ ನಾನು ಒಂದು ಕಣೆಯನ್ನು ಹೇಳುತ್ತೇನೆ. ಅದನ್ನಿಷ್ಟು ನೀವೆಲ್ಲರೂ ಕೇಳಿ ಆ ಮೇಲೆ ನಿಮ್ಮ ಕಾರ್ಯಗಳನ್ನು ಮಾಡಬಹುದೆಂದು ವಿನಯದಿಂದ ನುಡಿದು ಹೇಳಹತ್ತಿದನು. †

---

† ರಾಗ || ಪಂತುವರಾಳಿ || ಆದಿತಾಳ ||

ಕಣೆಯ ಹೇಳಬಂದೆ ನಾರಾಯಣನಲ್ಲದಿಲ್ಲವೆಂದು || ಪಲ್ಲ || ಬಣಗು ದೈವದ ಗೊಡವೆ ಬ್ಯಾಡ ನರಕ ತಪ್ಪದು || ಅನುಪಲ್ಲ ||

ಉಕ್ಕನಾಶಿಯೆರ್ರಿ ಕಾಟಿ ಜಕ್ಕಿಯರೊರ್ಕನ್ನೆಯಾರು | ಸೊಕ್ಕಿನಿಂದ ಸೊಂಟ ಮುಕ ಬೈರೆ ದ್ಯಾವರು || ಮಿಕ್ಕ ಮಾರಿ ಮಸಣಿ ಚೌಡಿ ಮೈಲಾರಿ ಮೊದಲಾದ ಇಂಥ | ರಕ್ಕ ದೈವದ ಗೊಡವೆ ಬೇಡ ನರಕ ತಪ್ಪದು || ೧ ||

ಹಳ್ಳಿಯವರ ಮಾತು ಕೇಳಿ ಖುಳ್ಳರೆಲ್ಲಾ ಕೂಡಿಕೊಂಡು | ಹಾಳುಮಾಡಿ ಕೈಯಲ್ಲಿದ್ದ ಹಣ ಕಾಸುಗಳು || ಭಾಳು ಭಾಳನೆ ಕುರಿಯ ಕೋಣ ಭೇಳುಭೇಳುನೆ

ಕನಕಪ್ಪನ ಕಣೆಯಲ್ಲಿ ಎಂತಹ ಮೋಹನ ಸಾಮರ್ಥ್ಯವಿದ್ದಿತೋ ದೇವರಿಗೆ ಗೊತ್ತು. ಅದನ್ನು ಕೇಳುತ್ತಲೆ ಎಷ್ಟೋ ಜನರು ಇನ್ನುಮೇಲೆ ಇಂಥ ಅಕಾರ್ಯ ಗಳನ್ನು ಮಾಡಲಿಕ್ಕಿಲ್ಲೆಂದು ಆಣೆಯನ್ನೇ ಇಟ್ಟುಕೊಂಡರು. ಚಾತ್ರಿಯ ಪರಶಿ ಯಲ್ಲ ಬೊಟ್ಟು ಕಚ್ಚಿ ಅರಗು-ಬೆರಗಾಗಿ ನಿಂತು ಬಿಟ್ಟಿತು.

ವಾಚಕರೆ—ಸಾಧುಗಳು ದರ್ಶನಮಾತ್ರದಿಂದಲೇ ಫಲವನ್ನು ಕೊಡುತ್ತಾರೆಂದು ಹೇಳುವ ಮಾತು ಸುಳ್ಳಲ್ಲ.

---

## ೧೧ನೇ ಕಥೆ

## ಅನಾವೃಷ್ಟಿಯನ್ನು ಕಳೆದದ್ದು.



ಕನಕನು ಅಲ್ಲಿಂದ ಮುಂದೆ ನಡೆಯಲು ಮಾರ್ಗದೊಳಗೆ ಒಂದು ಪ್ರದೇಶದಲ್ಲಿ ಅನಾವೃಷ್ಟಿಯ ಬಾಧೆಯಿಂದ ಜನರು ಬಹಳ ಸಂಕಟಪಡುತ್ತಲಿದ್ದರು. ಎಲ್ಲರಿಗೂ ಮಳೆ ಬೇಕಾದ ಕಾಲ. ಜನರು ಆಕಾಶದ ಕಡೆಗೆ ನೋಡಿ ನೋಡಿ ಬೇಸತ್ತರು. ನಿಟ್ಟುಸಿರಿಟ್ಟರು. ಮಾಡುವದೇನು? ಹಿಂದಿನ ವರ್ಷವೂ ಮಳೆಯಿಲ್ಲ ಈಗಲೂ ಮಳೆಯಾಗದಿದ್ದರೆ ಬೆಳೆ ಬರುವಂತಿಲ್ಲ ಬೆಳೆ ಬರದಿದ್ದರೆ ಜನರೂ ದನಕರಗಳೂ ಬದುಕುವಂತಿಲ್ಲ ಇಂಥ ವೇಳೆಯಲ್ಲಿ ಕನಕಪ್ಪನು ಆ ಪ್ರದೇಶದ ಕಡೆಗೆ ಬಂದನು. ಅಲ್ಲಿಯ ಜನರು ಕರ್ಣೋಪ-ಕರ್ಣವಾಗಿ ಆತನ ಮಹಿಮೆಯನ್ನು ಕೇಳಿದ್ದರು. ಪ್ರತ್ಯಕ್ಷವಾಗಿ ಈಗ ಆತನೇ ಬಂದು ಬಿಟ್ಟಿರುವನು. ಆವರಿಗೆ ಆದ ಸಂತೋಷವನ್ನು ಏನೆಂದು ಹೇಳೋಣ! ಕನಕನನ್ನು ಕಂಡಕೂಡಲೆ ಜನರು ಗುಂಪು ಗುಂಪಾಗಿ ಬಂದು ಆತನಿಗೆ ಶರಣಾಗತರಾದರು. ಕನಕನು ಗಾಬರಿಯಾಗಿ ಇದೇನೆಂದು ಕೇಳಿದನು. ಜನರು ತಮ್ಮ ದೈನ್ಯಾವಸ್ಥೆಯನ್ನು ಹೇಳಿಕೊಂಡರು. ಕನಕ

---

ಕೊರಳ ಕೊಯ್ದು | ಬೀಳಬೇಡಿ ನಂಕಕ್ಕೆ ಎಂಥೇಳಬಂದೆನೋ || ೨ ||

ಮಡಿಯನುಟ್ಟು ಮಮತೆಯಿಂದ ಮಾರಿಯ ಪೂಜೆಯ ಮಾಡಿ | ಕೆಡಬೇಡಿ ಜನರೆಲ್ಲಾ ಮುಂದಿನ ಕೇಡನರಿಯದೆ || ದೃಢಭಕ್ತಿಯಿಂದಲಿ ನಮ್ಮ ಬಾಡದಾದಿಕೇಶವನ ಪಾದ | ಬಿಡದ ಭಜಿಸಿರೊ ಈ ಪೊಡವಿಜನರು || ೩ ||

ನಿಗೆ ಕರುಣ ಬಂತು. ಆಗ ಅವನು—ಒಳ್ಳೇದು ನಿಮ್ಮ ಪುಣ್ಯವು ಹೇಗಿದೆಯೋ ನೋಡೋಣವೆಂದು ಹೇಳಿ ಶ್ರೀಹರಿಯನ್ನು ಕೊಂಡಾಡ ಹತ್ತಿದನು ಜನರನ್ನೂ ದೇವರ ಧ್ಯಾನಕ್ಕೆ ಹಚ್ಚಿದನು ದಿನವಾಯಿತು. ಎರಡು ದಿನವಾಯಿತು ಮಳೆಯ ಸುದ್ದಿ ಇಲ್ಲ. ಮೊದಲೇ ಭಕ್ತಿವಿಹೀನರಾಗಿದ್ದ ಅನೇಕರಿಗೆ ಇದೊಂದು ಒಳ್ಳೇ ಸಮಯ ಸಿಕ್ಕಂತಾಯಿತು. ಅವರು ಕನಕಪ್ಪನನ್ನೂ-ಮೂಢಭಕ್ತಿಯ ಜನರನ್ನೂ ಒಳಿತಾಗಿ ನಿಂದಿಸಿದರು. ಆದರೇನು? ಕನಕನಿಗೆ ಹಿಗ್ಗೂ ಇಲ್ಲ. ತಗ್ಗೂ ಇಲ್ಲ. ಆ ಮೇಲೆ ದೇವರನ್ನು ಬೇಡಿಕೊಂಡನು—'ಸ್ವಾಮಿ! ನಾನು ನಿನ್ನ ಭಕ್ತನೇ ಆಗಿದ್ದ ಪಕ್ಷದಲ್ಲಿ ನನ್ನ ದೆಸೆಯಿಂದ ಇಲ್ಲಿ ಮಳೆಯನ್ನು ಸುರಿಸಬೇಕು.' ಎಂದು; ದೇವರು ಭಕ್ತಾಧೀನನು. ಭಕ್ತವತ್ಸಲನು. ಆತನು ಭಕ್ತರ ಭಿಡೆಯನ್ನು ಮೀರಲಾರನು. 'ನಿತ್ಯದಯಾಳು ದೇವರನ ಭಕ್ತಿಯಿಂನೆನೆದರೆ ಬಳಿನಾಳಯ್ಯ ಸರ್ವಜ್ಞ' ಎಂಬ ಸರ್ವಜ್ಞಕವಿಯ ಉಕ್ತಿಯಂತೆ ತನ್ನ ಭಕ್ತರು ಬೇಡಿದ ಇಷ್ಟಾರ್ಥಗಳನ್ನು ಕೊಡಲು ಆ ಕರುಣಾಮಯನಾದ ಭಗವಂತನು ಒಂಟಿಗಾಲಿನಿಂದ ಸಿದ್ಧನಾಗಿ ನಿಂತುಕೊಂಡಿದ್ದನು. ಅಂದ ಮೇಲೆ ಏನು ತಡ! ತಕ್ಷಣವೇ ಮೋಡಗವಿದು ಮಳೆ ಸುರಿದೂ ಹೋಯಿತು. ಕೆರೆ ಕೊರೆಗಳು ತುಂಬಿ ತುಳುಕಹತ್ತಿದವು. ಜನರಿಗಾದ ಆನಂದ ವನ್ನು ಅಷ್ಟಿಷ್ಟೆಂದು ಹೇಳಲೇ ತೀರದು. ಇಂಥ ಮಹಾತ್ಮರನ್ನು ಕಾಣಲಿಲ್ಲವೆಂದು ಪರಿಪರಿಯಿಂದ ಕೊಂಡಾಡಿದರು. ಜನರಿಗಾದ ಈ ಆನಂದದ ಲಹರಿಯಲ್ಲಿ ಕನಕನ ಮಹಿಮೆಯೂ ತೇಲುತ್ತ ತೇಲುತ್ತ ಬಹು ದೂರದವರೆಗೂ ಹಬ್ಬಿತು. ಆಗ ಸುತ್ತಲಿನ ಹಳ್ಳಿಯಲ್ಲಿರುವ ಅನೇಕ ಜನರು ತಂಡೋಪ-ತಂಡವಾಗಿ ಬಂದು ಕನಕಪ್ಪನನ್ನು ಕಾಣಹತ್ತಿದರು. ಇದೊಂದು ಜಾತ್ರೆಗಿಂತ ಹೆಚ್ಚಾಯಿತು ಎಷ್ಟೋ ಜನರು ಚಳಿ ಜ್ವರದ ಬಾಧೆಯನ್ನು ತಾಳಲಾರೆವೆಂದು ಬೇಡಿಕೊಂಡರು. ಕನಕಪ್ಪನು ಅವರಿಗೆ ಒಂದೊಂದು ತುಳಸೀದಳವನ್ನು ಲಿಂಬೇಹಣ್ಣಿನ ರಸದಲ್ಲಿ ಕೊಟ್ಟುಬಿಟ್ಟನು ಆಯಿತು ಇದರಂತೆ ಮಕ್ಕಳನ್ನು ಕೇಳಿಕೊಂಡ ಎಷ್ಟೋ ಜನರಿಗೆ ಮಕ್ಕಳನ್ನು ಅನುಗ್ರಹಿಸಿದನು. ಕಣ್ಣಿಲ್ಲದವರಿಗೆ ಕಣ್ಣನ್ನು ಕೊಟ್ಟನು. ಭಕ್ತಿರಹಸ್ಯವನ್ನು ಕೇಳಿದವರಿಗೆ ಭಕ್ತಿರಹಸ್ಯವನ್ನು ತಿಳಿಸಿದನು.

ಈ ಪ್ರಕಾರ ಜನರು ಕನಕನಲ್ಲಿ ಅತ್ಯಂತ ಪೂಜ್ಯಭಾವವುಳ್ಳವರಾಗಿ—ಎಲೈ ಮಹಾನುಭಾವನೇ-ನಮ್ಮಲ್ಲಿ ಇಷ್ಟು ರೋಗಾದ್ಯುಪದ್ರವಗಳು ಹುಟ್ಟುವದಕ್ಕೆ ಕಾರ ವನ್ನು ತಿಳಿದು ಹೇಳಬೇಕು ಎಂದು ಬೇಡಿಕೊಳ್ಳಲು ಕನಕಪ್ಪನು ಒಂದು ಮನೋ

ಹಂವಾದ *ಕೀರ್ತನೆ ನ್ನು ಹೇಳಿಬಿಟ್ಟನು. ಇದನ್ನು ಕೇಳಿಯುಂಟೂ ಜನರು ಹಾ ಹಾರಿ ನಿಂತರು. ಭಕ್ತಿಯಿಂದ ಭಗವಂತನನ್ನು ಭಜಿಸುವವರಿಗೆ ಏನಾದೀತು ಏನಾ ಗಲಿಕ್ಕಿಲ್ಲ! ಹರಿನಾಮ ಮಹಿಮೆಯೇ ಅಂಥಾದ್ದು.

ಹರಿಯ ನಾಮ ಸಮಸ್ತ ಭಯನಿವಾರಣವಯ್ಯ | ಹರಿನಾಮ ಮನಸಿಗೆ ನಿರ್ಮಲ ಕಾಣೋ | ಹರಿನಾಮ ಸರ್ವದೇವತೆಗಳಿಂದಧಿಕ | ಹರಿನಾಮದ ಮಹಿ ಮೆಯನು ಬಣ್ಣಿಸುವರಾರಯ್ಯ | ಹರಿ ಹರಿ ಹರಿ ಎಂದು ನೆನೆದರೆ ರೋಗಂಗಳು ಅಳಿದು ಪೋಗುವಯ್ಯಾ | ಹರಿನಾಮ ಸಕಲ ಪ್ರಾಯಶ್ಚಿತ್ತಕ್ಕೆ ಮೊದಲು | ಹರಿ ನಾಮವಿರಲಾಗಿ ಮತ್ತೊಂದಪೇಕ್ಷೆ ವೇ? | ಹರಿನಾಮ ನಿಜಸ್ವಾಮಿ ವಿಜಯವಿಠಲ ನಂಘ್ರಿ ಪರಿಶುದ್ಧನಾಗಿ ಎಳ್ಳನಿತು ಮನದಲ್ಲಿಟ್ಟು ||

(ವಿಜಯದಾಸರು)

---

* ರಾಗ—ಶಂಕರಾಭರಣ ||

ಧರ್ಮವೆಂದೆನಿಪ ಮಾರ್ಗದಾರಿಯನೆ ಬಿಟ್ಟು | ಕರ್ಮವೆಂದೆನಿಪ ಕಾನನವ ಪೊಕ್ಕು | ದುರ್ಮಾರ್ಗದಲಿ ನಡೆದವಗೆ ಘೋರವ್ಯಾಧಿ | ಕರ್ಮಪಾಕದಲಿ ಸಾರು ತಿಹಕೊ ಜಗದಿ || ಪ ||

ಹರಿಹರವಿಭೇದ ಗೈದವರಿಗೆ ದಂತಾದ್ಭುತವು | ಗುರುದೈವಗಳ ನಿಂದೆಗೆಯ್ದ ವರಿಗೆ ಉನ್ಮಾದವು | ಪರಸತಿಯ ಕಾಮಿಸಿದವರಿಗೆ ಪಾಂಡುರೋಗವು | ಕೆರೆಗಳನು ಒಡಿಸಿದವರಿಗೆ ಶೀತಜ್ವರವು | ಹಿರಿಯರನ ಜರಿದವರಿಗೆ ಪಿನಸರೋಗವು | ಧರೆಯ ನಳಿಸಿದವರಿಗೆ ಸರ್ವಾಂಗ ಪರಿಕ್ಲೇಶ | ಪುರಅಗ್ರಹಾರವ ಕೆಡಿಸಿದವರಿಗೆ ರಾಜರೋಗ ವೆಂದು | ಅರಿವುದು ಸಕಲ ಜನರು || ೧ ||

ಕಥೆ-ಪುರಾಣಗಳ ಹಳಿದವರಿಗೆ ಖಾಸಶ್ವಾಸ | ಮತಭೇದವನು ಮಾಡಿದವ ರಿಗೆ ಮೂಲವ್ಯಾಧಿ | ಪಿತ-ಮಾತೆಯರ ಸಲಹದವರಿಗೆ ಹುಟ್ಟುವದು ಗಂಡಮಾಲೆ| ಯತಿಗಳನು ನಿಂದಿಸಿದವರಿಗೆ ಸನ್ನಿಪಾತಕವು | ಪರಸತಿಯರಿಗಳುಪಿದವರಿಗೆ ಮೂತ್ರ ಕೃಚ್ಛ | ಪತಿವ್ರತೆಯರ ಪೀಡಿಸಿದವರಿಗೆ ಅತಿಸಾರವೆಂದು ಅರಿವುದು ಸಕಲ ಜನರು || ೨ || ಶಿಶುಹತ್ಯಮಾಡಿದವರಿಗೆ ಕುಕ್ಷಿಶೂಲಿ | ಪಶುಗಳನ್ನು ಮರ್ದಿಸಿದವ ರಿಗೆ ಪ್ರಮೇಹವು | ಉಸುರಲ್ಯಾಕಿನ್ನು ಸ್ವಾಮಿದ್ರೋಹಿಗಳಿಗೆ ಬಹುಮೂತ್ರ | ಪುಸಿದು ಮಾತಾಡುವ ಪುರುಷರಿಗೆ ರಕ್ತಕಾಶಿ | ಹಸಿದವರಿಗೆ ಅನ್ನವಿಕ್ಕದವರಿಗೆ

## ೧೨ನೆ ಕಥೆ.

## ಕುರುಬರನ್ನು ಆನಂದಪಡಿಸಿದ್ದು.

ಈ ಪ್ರಕಾರ ಕನಕನು ಜನರನ್ನು ಭಕ್ತಿಮಾರ್ಗಕ್ಕೆ ಎಳೆಯುತ್ತಾ ಮುಂದೆ ಸಾಗಿದನು. ಮಾರ್ಗದೊಳಗಿನ ಒಂದು ಹಳ್ಳಿಯಲ್ಲಿ ಕುರುಬರೆಲ್ಲರೂ ಕೂಡಿ ಪರ್ವ (ಬೀರದೇವರ ಹಬ್ಬ) ಮಾಡುವದನ್ನು ನಿಶ್ಚಯಿಸಿ ಒಟ್ಟುಗೂಡಿದ್ದರು. ಬೀರಪ್ಪನಿಗೆ ಸಂತೋಷಕರವಾದ ಡೊಳ್ಳು ವಾದ್ಯಗಳು ಬಾರಿಸಹತ್ತಿದ್ದವು. ಈ ಗದ್ದಲವನ್ನು ಕೇಳಿ ಕನಕಪ್ಪನು ಊರೊಳಗೆ ಬಂದನು. ತಮ್ಮ ಜಾತಿಯ ದಾಸಯ್ಯನೊಬ್ಬನು ಅದರಲ್ಲೂ ಸಾಧುಸಂತನಾದವನು ಇಂಥಾ ಪರ್ವಕಾಲದಲ್ಲಿ ತಮಗೆ ದೊರೆತದ್ದನ್ನು ಕಂಡು ಕುರುಬರಿಗೆಲ್ಲ ಪರಮ ಸಂತೋಷವಾಯಿತು. ನಮ್ಮ ಡೊಳ್ಳಿನ ಗತ್ತಿಗೆ ಸರಿಯಾಗಿ ಒಂದು ಪದವನ್ನು ಹೇಳಬೇಕೆಂದು ಕನಕನಿಗೆ ದುಂಬಾಲು ಬಿದ್ದರು. ಕನಕನು ಈಗ ಏನು ಮಾಡಬೇಕು? ಪದವನ್ನು ಹೇಳುವದಾದರೆ ಅವರಿಗೆ ಸರಿಯಾದದ್ದನ್ನು ಹೇಳಬೇಕು. ಇಲ್ಲದಿದ್ದರೆ ಇಲ್ಲಿಯವರೆಗಿನ ಮರ್ಯಾದೆಯನ್ನು ಕಳಕೊಳ್ಳಬೇಕು. ಇಂಥ ಪ್ರಸಂಗ ಬಂತು. ಅದರೇನು? ಕನಕನು

---

ಅಮ್ಲಪಿತ್ತ | ವೃಷಭಕನು ಒದ್ದವರಿಗೆ ಬಿಗುರುವಾತ | ಎಸಗುವದು ವಿಶ್ವಾಸಘಾತುಕನಿಗೆ ನರರೋಗ ಹುಸಿಯಲ್ಲ ಕೇಳಿಜನರು || ೩ ||

ಕೊಟ್ಟಭಾಷೆಗೆ ತಪ್ಪಿದವರಿಗೆ ಉಪಜಿಹ್ವೆ ಕೊಟ್ಟು ತಪ್ಪಿದವರಿಗೆ ಕರಕಂಪನವು | ಕೊಟ್ಟು ಕೊಡಲಿಲ್ಲವೆಂಬವರಿಗೆ ಉದರರೋಗ ಕೊಂಡೆರಡು ನುಡಿದವರಿಗೆ ಮೋಹರೋಗವು | ಅಷ್ಟಮದದಿಂದ ಮೆರೆದವರಿಗೆ ಬೆರಗಿನ ರೋಗ | ಬಟ್ಟೆಯೊಳು ಮುಳ್ಳು ಹರಡಿದವರಿಗೆ ನೇತ್ರವ್ಯಾಧಿ | ಕಟ್ಟುತಿಹ ವಿವಾಹ ಮುಂಚೆ ಕಂಟಕರಿಗೆ ಹುಟ್ಟುವದು ಕುಷ್ಟರೋಗ ಕೇಳಿರಿ ಸಕಲ ಜನರು || ೪ ||

ಹಿಂದೆ ಮಾಡಿದ ಧರ್ಮ ಕರ್ಮವ ಬಲ್ಲವರ್ಯಾರೆನುತ | ಮಂದಮತಿಗಳಾಗಿ ನೀವು ಕೆಟ್ಟಳಿಯದಿರಿ | ಮುಂದಿದಕೆ ಸಾಕ್ಷಿ ಸಾರುತಿದಕೊ ಜಗದಿ | ಹಿಂದಿಣದೆಲ್ಲವು ಇಹುದಿಲ್ಲವೆಂಬುವದಕ್ಕೆ ಸಾಕ್ಷಿ | ಚಂದದಲಿ ತಾಯಿ ತನ್ನ ಮಕ್ಕಳಿಗೆ ಮೊಲೆ ಹಾಲು | ತಂದು ಹೊಯಿವ ತೆರದಿ ಉಣಿಸಿದಲ್ಲದೆ ಬಿಡದು | ಕಂದರ್ಪ ಕಾಗಿನೆಲೆಯಾದಿಕೇಶವನ | ಮುಂದರಿತು ಭಜಿಸಿ ಮುಕ್ತಿಯ ಪಡೆಯಿರಣ್ಣಾ || ೫ ||

ಇದಕ್ಕೆ ನೊಪ್ಪು ಹಾಕಲಿಲ್ಲ. ಅವನೇನು ಸುಕವಿಯೇ? ಛಂದಃಶಾಸ್ತ್ರಾಲಂಕಾರಗಳನ್ನು ಓದಿ ಲಕ್ಷಣವನ್ನು ಗೊತ್ತುಮಾಡುವದಿದೆಯೇ? ಹೊಸದಾಗಿ ಶಬ್ದಸಂಗ್ರಹವನ್ನು ಮಾಡಬೇಕಾಗಿದೆಯೇ? ಯಾವದೂ ಇಲ್ಲ. ಆತನು ಒಬ್ಬ ವರಕವಿ. ಅವನ ಬಾಯಿಂದ ಬಂದದ್ದೇ ಪದ್ಯ. ಅದೇ ಲಕ್ಷಣಶಾಸ್ತ್ರ. ಅದೇ ಅಲಂಕಾರ. ಕನಕಪ್ಪನು ಹೇಳಹತ್ತಿದನು. + ಕುರುಬರು ಡೊಳ್ಳಿನ ಮೇಲೆ ಕೈ ಹಾಕಿದರು. ಆಗಿನ ಕಾಲದಲ್ಲಿ ಕುರುಬರಿಗಾದ ಆನಂದವಿನ್ನೆಷ್ಟೋ ಅದನ್ನು ಬಾಯಿಂದ ತಿಳಿಸಿ ಹೇಳುವದು ಅಸಾಧ್ಯ. ತಮ್ಮ ಗತ್ತಿಗೆ ಸರಿಯಾಗಿ ಹೇಳಿದ ಪದವನ್ನು ಕೇಳಿ ಅವರ ಹಿರಿಹಿರಿ ಹಿಗ್ಗಿದರು. ಇಂಥಾ ದಾಸಯ್ಯನನ್ನು ಕಾಣಲಿಲ್ಲವೆಂದು ಕೊಂಡಾಡಿದರು ಪದವು ಕುರುಬರಿಗೆ ತಕ್ಕದ್ದಾಗಿದ್ದರೂ ಶ್ರೀಮನ್ನಾರಾಯಣನ ದಶಾವತಾರವನ್ನೇ ಕೊಂಡಾಡುವದಾಗಿರುತ್ತದೆ. ಕೇವಲ ಭಗವದ್ಭಕ್ತನಾದವನು ಹರಿಸ್ತುತಿಯನ್ನಲ್ಲದೆ ನರಸ್ತುತಿಯನ್ನು ಎಂದಿಗಾದರೂ ಮಾಡುವನೇ? ಹೀಗೆ ಇಹಪರಗಳೆರಡಕ್ಕೂ ಸರಿಯಾದ ರೀತಿಯಲ್ಲಿ ಜನರನ್ನು ಹಾದಿಗೆ ತಂದಂಥ ಕನಕಪ್ಪನ ಜ್ಞಾನವು ಎಷ್ಟು ಅಮೋಘವಾದದ್ದಿರಬೇಕು ನೋಡಿರಿ! ಭಗವಂತನ ನಾಮಸ್ಮರಣೆಯೇ ಮುಖ್ಯವೆಂದು ನಂಬಿದ ಮಹಾತ್ಮರು ಧನ್ಯರು ಧನ್ಯರು. ಈ ವಿಷಯದಲ್ಲಿ ಶ್ರೀ ರಂಗೋಲಿದಾಸರು ಬಹು ಸರಸವಾಗಿ ಹೇಳಿದ್ದಾರೆ.

---

\+ ರಾಗ—ದೇಶಿ || ಛಾಪು ತಾಳ ||

ದೇವಿ ನಮ್ಮ ದೇವರು ಬಂದಾವು ಬನ್ನೀರೆ ನೋಡಬನ್ನೀರೆ || ಪಲ್ಲ ||

ಕೆಂಗಣ್ಣಮೀನನಾಗಿ ನಮ್ಮ ರಂಗ | ಗುಂಗಾಡಿ ಸೋಮನ ಕೊಂದಾನ್‌ವ್ವಾ ||
ಗುಂಗಾಡಿ ಸೋಮನ ಕೊಂದು ವೇದವ | ಭಂಗಾರ ಸೂಡ ಲಂಗಿತ್ತಾನ್‌ವ್ವಾ ||೧||
(ಮತ್ಸ್ಯ)

ದೊಡ್ಡ ಮಡುವಿನೊಳಗೆ ನಮ್ಮ ರಂಗ | ಗುಡ್ಡವ ಹೊತ್ತು ತಿರಿಗ್ಯಾನ್‌ವ್ವಾ ||
ಗುಡ್ಡವ ಹೊತ್ತುಕೊಂಡು ತಿರಿಗಿ ಸುರರನ್ನ | ದೊಡ್ಡವರನ್ನ ಮಾಡ್ಯಾನ್‌ವ್ವಾ ||೨||
(ಕೂರ್ಮ)

ಚನ್ನಕಾಡಿನ ಹಂದಿಯಾಗಿ | ಚಿನ್ನದಕಣ್ಣಿನ ಕೊಂದಾನ್‌ವ್ವಾ || ಚಿನ್ನದ ಕಣ್ಣಿನ ಕೊಂದು ಭೂಮಿಯ | ಚೆನ್ನಕ ಒಡಲಂಗಿತ್ತಾನ್ವ್ವ ||೩|| (ವರಾಹ)

ಸಿಟ್ಟಿಲಿಸಿಂಹನಾಗಿ ನಮ್ಮ ರಂಗ | ಹೊಟ್ಟೆಯ ಕರುಳ ಬಗೆದಾನವ್ವ ||
ಹೊಟ್ಟೆಯ ಕರುಳ ಬಗೆದು ನಮ್ಮ ರಂಗ | ಪುಟ್ಟಗೆ ವರಗಳ ಕೊಟ್ಟಾನವ್ವ ||೪||
(ನಾರಸಿಂಹ)

"ಫಲವಿದು ಬಾಳ್ವುದಕೆ | ಸಿರಿ | ನಿಲಯನ ಗುಣಗಳ ಪೊಗಳಿ ಹಿಗ್ಗು
ವುದೆ || ಪಲ್ಲ ||

ಹೃದಯದಿ ರೂಪವು ವದನದಿ ನಾಮವು | ಉದರದಿ ನೈವೇದ್ಯವುಶಿರದಿ ||
ಪದಜಲನಿರ್ಮಾಲ್ಯವನೆಧರಿಸಿಕೋ | ಎದರಸದನಧೆಗ್ಗದವಕಾವುದಿದೆ ||೧||
ಹರಿಕಥೆ ಪರಮಾದರದಲಿ ಕೇಳುತ | ಮರದುತನುವ ಸುಖಸುರಿಸುತಲಿ ||
ಉರುಗಾಯನ ಸಂದರಶನ ಹಾರೈ | ಸಿರಲು ಹಗಲು ಜರಿಜರಿದುಬಳಲುವುದೆ ||೨||

---

ಹುಡುಗ ಹಾರ ವನಾಗಿ ನಮ್ಮ ರಂಗ | ಬೆಡಗಿಲಿಮುಗಿಲಿಗೆ ಬೆಳೆದಾನಮ್ಮಯ್ಯ ||
ಬೆಡಗೀಲಿಮುಗಿಲಿಗೆ ಬೆಳೆದು ಬಲಿಯನ್ನ | ಅಡಿಯಿಂದ ಪಾತಾಳಕೊತ್ತ್ಯಾನಮ್ಮಯ್ಯ ||೫||
(ವಾಮನ)

ತಾಯಿಯ ಮಾತನು ಕೇಳಿ ನಮ್ಮ ರಂಗ | ಆವಿನಕಳ್ಳನ ಕೊಂದಾನಮ್ಮಯ್ಯ ||
ಆವಿನ ಕಳ್ಳನ ಕೊಂದು ಭೂಮಿಯ | ಅವನೀಸುರರಿಗೆ ಇತ್ತಾನಮ್ಮಯ್ಯ ||೬||
(ಪರಶುರಾಮ)

ಪಿಂಗಳಗಣ್ಣಿನ ಕೊಂಗಗಳ (ತಿಂಗಿಗಳ) ಕೂಡಿ | ಜಂಘಿಲಿ ಲಂಕೆಗೆ
ಪೋದಾನಮ್ಮಯ್ಯ ||
ಜಂಘಿಲಿ ಲಂಕೆಗೆ ಪೋಗಿ ನಮ್ಮ ರಂಗ | ಹೆಂಗಸುಗಳ್ಳನ ಕೊಂದಾನಮ್ಮಯ್ಯ ||೭||
(ರಾಮ)

ಬಿಂಕದಗೊಲ್ಲನಾಗಿ ನಮ್ಮ ರಂಗ | ಟೊಂಕಾತುರಿಕಿಯ ಕೂಡ್ಯಾನಮ್ಮಯ್ಯ ||
ಟೊಂಕವ ರಿಕಿಯ ಕೂಡಿ ಮಾವನ | ಬಿಂಕವನೆಲ್ಲವ ಮುರಿದಾನಮ್ಮಯ್ಯ ||೮||
(ಕೃಷ್ಣ)

ತುರುಗಳ ಕಾಯುತ ಹುಡುಗರ ಕೂಡಿಕೊಂಡು | ಕರಿಯ ಹೊಳೆಗೆ
ಹೋದಾನಮ್ಮಯ್ಯ ||
ಕರಿಯಹೊಳೆಗೆ ಹೋಗಿ ನಮ್ಮ ರಂಗ | ಉರಗನ ಮಡುವ ಧುಮುಕ್ಯಾನಮ್ಮಯ್ಯ ||೯||
ಕರಿಗುಮಡುವಿನೊಳು ನಮ್ಮ ರಂಗ | ಉರಗನ ಹೆಡೆಯೊಳು ಕುಣಿದಾನಮ್ಮಯ್ಯ ||
ಉರಗನ ಹೆಡೆಯೊಳ್ಗು ಹಾರ್ಯಾರಿ ಕುಣಿವಾಗ | ಯಾರ್ಯಾರಿಗೇನೇನ ಕೊಟ್ಟ್ಯಾನಮ್ಮಯ್ಯ
||೧೦||

ಭಂಡನಂದದಿ ಕುಂಡಿಯ ಬಿಟಗೊಂಡು | ಕಂಡಕಂಡಲ್ಲೆ ತಿರಿಗ್ಯಾನಮ್ಮಯ್ಯ ||
ಕಂಡಕಂಡಲ್ಲೆ ತಿರಿಗಿ ತ್ರಿಪುರರ | ಹೆಂಡರನೆಲ್ಲ ಕೆಡಿಸ್ಯಾನಮ್ಮಯ್ಯ ||೧೧|| (ಬೌದ್ಧ)

# ೧೩ನೇ ಕಥೆ.

## ಹಂಪಿಗೆ ಪ್ರಯಾಣ.



ಕನಕನು ಒಮ್ಮೆ ಹಂಪೆಗೆ ಬಂದನು. ಪಂಪಾವಿರೂಪಾಕ್ಷನ ದರ್ಶನವಾಯಿತು. ಆದರೆ ಅಲ್ಲಿ ವಿರೂಪಾಕ್ಷದೇವರ ಭಕ್ತರಿಗೂ, ಕೇಶವದೇವರ ಭಕ್ತರಿಗೂ ಸ್ವಸ್ವದೇವತಾ ಶ್ರೇಷ್ಠತ್ವದ ಸಲುವಾಗಿ ವ್ಯಾಜ್ಯನಡೆದಿತ್ತು. ಒಬ್ಬರೂ ಹಿಡಿದ ಹಟವನ್ನು ಬಿಡಲೊಲ್ಲರು 'ಮಾತಿಗೆಮಾತು ಮಥಿಸಲ್ಕೆ ವಿಧಿಬಂದು ಆತುಕೊಂಡಿಹುದು' ಎಂಬ ಸರ್ವಜ್ಞಕವಿಯ ಉಕ್ತಿಯಂತೆ ಅದು ತೀರ ವಿಕೋಪಕ್ಕೆ ಬಂದ ಬಿಟ್ಟಿತು. ಎರಡೂ ಕಡೆಯವರು ಆಯುಧಪಾಣಿಗಳಾಗಿ ಯುದ್ಧಕ್ಕೆ ನಿಲ್ಲುವ ಪ್ರಸಂಗ ಬಂತು; ಆಗ ಅನಾಯಾಸವಾಗಿ ಅಲ್ಲಿಗೆ ಹೋದ ನಮ್ಮ ಕನಕಪ್ಪನ ಇದನ್ನ ನೋಡಿದನು. ಆತನಿಗೆ ತಡೆಯಲಿಲ್ಲ. ಇತ್ತಂಡದವರನ್ನು ದೇವಸ್ಥಾನಕ್ಕೆ ಕರಕೊಂಡು ಬಂದು ಹರಿಯೇ ಸರ್ವೋತ್ತಮನೆಂದು ಪ್ರತಿಜ್ಞಾಪುರಸ್ಸರವಾಗಿ ಪ್ರಮಾಣಮಾಡಿ ಆಗಲೇ ಒಂದು ಪದವನ್ನು ಹಾಡಿದನು. ಕದರಮಂಡಲಗಿಯ ರಾಮದಾಸರೂ ಒಮ್ಮೆ ಇದೇ ವಿಷಯದಲ್ಲಿ ಪಣವನ್ನು ಮಾಡಿ ಗದಗಿನಲ್ಲಿರುವ ಶ್ರೀವೀರನಾರಾಯಣನ ಗುಡಿಯ ಗೋಪುರದ ಮೇಲಿಂದ ಕೆಳಗೆ ಹಾರಿದ್ದರು. ಮತ್ತೊಮ್ಮೆ ಹುತ್ತದಲ್ಲಿ ಕೈಹಾಕಿ ಕೃಷ್ಣಸರ್ಪವೊಂದನ್ನು ಗರದರನೆ ಎಳಕೊಂಡು ಬಂದಿದ್ದರು. (ಈ ಕಥೆಗಳಂತೆ ಶ್ರೀ ಪುರಂದರದಾಸರೂ ಒಮ್ಮೆ ಕುರುಬರ ಗುಂಪಿಗೆ ಸೇರಿ ಅವರಿಗೆ ತಕ್ಕ ಒಂದು ಪದವನ್ನು ಇದೇ ರೀತಿ ಹೇಳಿಕೊಂಡಿರುತ್ತಾರೆ. ಅದರ ವರ್ಣನೆಯನ್ನು ಅವರ ಚರಿತ್ರದಲ್ಲಿ ಬರೆದಿರುವೆವು.) ಶ್ರೀಪುರಂದರದಾಸರೂ ಒಂದು ಸಾರೆ ಈ

---

ಚಲುವಹೆಂಡತಿ ಕುದುರೆಯ ಮಾಡಿಕೊಂಡು | ಒಳ್ಳೇರಂಗ ಶಿನಾದಂನ್ಯಾ ||
ಒಳ್ಳೇ ರಾಹುತನಾಗಿ ಮುಸಲರ | ಡೊಳ್ಳ ಹೊಟ್ಟೆಯ ಮ್ಯಾಲೊದ್ದಾನ್ಯಾ ||೧೨||

(ಕಲ್ಕಿ)

ಡೊಳ್ಳಿನ ಮ್ಯಾಲ್ ಕೈ ಭಂಮುಷ್ಪ ಹಾಕ್ಯಾನು | ತಾಳವ ಶಿವನಪ್ಪಾ ಕಟದಾನ್ಯಾ || ಒಳ್ಳೊಳ್ಳೆ ಪದಗಳ ಹನಮಪ್ಪ ಹಾಡ್ಯಾನು | ಚಂದವ ಕನಕಪ್ಪ ಕುಣದಾನ್ಯಾ ||೧೩||

ವಿಷಯದಲ್ಲಿ—"ಹರಿಯೆ ಸರ್ವೋತ್ತಮ. ಹರಿಯೆ ಪರದೈವತೆ | ಹರಿಸರ್ವಂ ವಿಷ್ಣುಮಯಂ ಜಗತು || ಹರಿಯಲ್ಲದನ್ಯತ್ರ ದೈವಂಗಳುಂಟೆಂದು | ಉರುಗನಾ ಮುಂಡಿಗಿನ್ನ್ಯಾರಾದರೆತ್ತಲಿ" || ಪಲ್ಲ || ಎಂಬದಾಗಿ ಪ್ರತಿಜ್ಞೆಯನ್ನು ಮಾಡಿರುತ್ತಾರೆ. ಇದರಂತೆಯೇ ಕನಕನೂ ಪ್ರತಿಜ್ಞೆ ಮಾಡಿ * ಕೀರ್ತನವನ್ನು ಹೇಳಲು ಅದೇ ವೇಳೆಯಲ್ಲಿ ಈತನ ಅಭಿಪ್ರಾಯದಂತೆಯೇ ಆಕಾಶವಾಣಿಯಾಯಿತು. ಜನರು ಇದನ್ನು ನೋಡಿ ದಂಗು ಬಡೆದು ನಿಂತರು. ಈತನು ಮಹಾತ್ಮನೆಂದು ತಿಳಿದು ಸಾಷ್ಟಾಂಗಹಾಕಿದರು. ಎಲ್ಲಿ ಹೋದರೂ ಇದೇ ಮಾತು. ಇದೇ ಕಥೆಯಾಯಿತು. ಕನಕಪ್ಪನು ಮಹಾತ್ಮನೆಂಬದು.

---

ರಾಗ—ರೇಗುಪ್ತಿ ಅಟತಾಳ.

ಬಲ್ಲವರೆ ಬಲ್ಲರು ಎಲ್ಲರರಿಯರು | ಫುಲ್ಲಲೋಚನ ಪರಬ್ರಹ್ಮನೀನೆಂದು ಅಜನು ಅಧಿಕ ಬಲ್ಲ ಅನಲಸ್ನೇಹಿತ ಬಲ್ಲ | ಗಜಚರ್ಮಾಂಬರ ಬಲ್ಲ ಗರುಡಬಲ್ಲ ||ಪ|| ಭುಜಗೇಶ್ವರನು ಬಲ್ಲ ಭೂರಿಲೋಚನ ಬಲ್ಲ | ತ್ರಿಜಗಾಧಿಪತಿ ತ್ರಿವಿಕ್ರಮ ನೀನೆಂಬುದನು || ೧ ||

ಅಂಬರೀಷನು ಬಲ್ಲ ಅತ್ರಿಋಷಿಯು ಬಲ್ಲ | ಸಂಭ್ರಮದಿ ಭೀಮ ಸಹದೇವ ಬಲ್ಲ || ಬೆಂಬಿಡದುದ್ಧವ ಬಲ್ಲ ಬೇರೊಬ್ಬ ಧ್ರುವಬಲ್ಲ | ಕಂಬುಚಕ್ರಧರ ಸರ್ವೋತ್ತಮ ನೀನೆಂಬುದನು || ೨ || ಶುಕಯೋಗೀಶ್ವರಬಲ್ಲ ಸುಗುಣಿನಾರದ ಬಲ್ಲ | ಭಕ್ತಪ್ರಹ್ಲಾದ ಬಲ್ಲ ಬಲಿಯು ಬಲ್ಲ || ರುಕುಮಾಂಗದನು ಬಲ್ಲ ಋಷಿಪರಾಶರಬಲ್ಲ ಮಕರಕುಂಡಲಧರ ಮಹಾತ್ಮನೀನೆಂಬುದನು || ೩ ||

ವಸಿಷ್ಠಮುನಿಬಲ್ಲ ವರವಿಭೀಷಣ ಬಲ್ಲ | ರಸಿಕವಾಲ್ಮೀಕಿಬಲ್ಲ ವಿದುರಬಲ್ಲ || ವಸುಭೀಷ್ಮನು ಬಲ್ಲ ಅಸುಪರೀಕ್ಷಿತ ಬಲ್ಲ | ಶಶಿಮಿತ್ರನೇತ್ರ ಸರ್ವೋತ್ತಮ ನೀನೆಂಬುದನು || ೪ ||

ಯೋಗೇಂದ್ರಕ್ರೂರಬಲ್ಲ ವಕ್ತಾತ್ರಶೌನಕಬಲ್ಲ | ಯೋಗೇಂದ್ರಕಪಿಬಲ್ಲ ಭೃಗು ಬಲ್ಲನು || ತ್ಯಾಗಿ ಧರ್ಮಜಬಲ್ಲ ಗಣದೊಳರ್ಜುನನ ಬಲ್ಲ | ಕಾಗಿನೆಲೆಯಾದಿಕೇಶವ ನೀನೆಂಬುದನು || ೫ ||

## ೧೪ ನೇ ಕಥೆ.



## ಗರಳಪುರಿಗೆ ಪ್ರಯಾಣ.



ಒಮ್ಮೆ ಕನಕನು ಗರಳಪುರೀಕ್ಷೇತ್ರ†ಕ್ಕೆ ಹೊರಟನು. ಮಧ್ಯದಲ್ಲಿ ಕಚ ಕೋಳುವೆಂಬದೊಂದು ಗ್ರಾಮ. ಅದರ ಸಮೀಪಕ್ಕೆ ಹೋಗುತ್ತಿರಲಾಗಿ ಕಾಡಿನಿಂ ದೊಂದು ಮದ್ದಾನೆಯು ಆರ್ಭಟಿಸುತ್ತ ಬಂದು ಬಿಟ್ಟಿತು. ಕನಕನು ನೋಡಿದನು. ಆನೆಯು ಸೊಂಡಿಯನ್ನು ಮೇಲಕ್ಕೆತ್ತಿಕೊಂಡು ಬೃಂಹಿತಧ್ವನಿಯೊಡನೆ ಈತನ ಕಡೆಗೇ ಬರಹತ್ತಿತು. ಹಾಗಾದರೆ ದಾಸರ ಗತಿಯೇನು? ಅವರಿನ್ನೆಲ್ಲಿ ಹೋಗ ಬೇಕು? ವಾಚಕರೇ ಇಂಥ ಯೋಚನೆಗಳೆಲ್ಲ ಅಲ್ಪರಾದ ನಮಗೇ ಹೊರತು ಸತ್ಪು ರುಷರಿಗಿಲ್ಲವೆಂದು ತಿಳಿಯಿರಿ, ಅವರ ಈ ಲೋಕದಲ್ಲಿ ನಡೆಯುವ ಸರ್ವ ವ್ಯಾಪಾ

† ಮೈಸೂರಿಗೆ ೧೪ ಮೈಲುಗಳ ದೂರದಲ್ಲಿ ಒಂದು ಶಿವಕ್ಷೇತ್ರವುಂಟು. ಅದಕ್ಕೆ ಗರಳಪುರಿಯೆಂತಲೂ ನಂಜನಗೂಡೆಂತಲೂ ಕರೆಯುವರು. ಇಲ್ಲಿ ನಂಜುಂ ಡೇಶ್ವರನ ದೇವಾಲಯವುಂಟು ಈ ಕ್ಷೇತ್ರಮಾಹಾತ್ಮ್ಯವು ಸ್ಕಂದಪುರಾಣದಲ್ಲಿ ವರ್ಣಿತವಾಗಿದೆ.

ಕಪಿಲಾ—ಕೌಂಡಿನೀನದಿಗಳ ಸಂಗಮದ ಕ್ಷೇತ್ರದಲ್ಲಿ ಮಹಾ ದುಷ್ಟನಾದ ಕೇಶಿಯೆಂಬ ರಾಕ್ಷಸನನ್ನು (ಕೈಕಸ ಮಗನು) ಈಶ್ವರನು ಕೊಲ್ಲಲು ಅವನ ದೇಹ ದಿಂದ ಹೊರಟ ವಿಷಜ್ವಾಲೆಗಳು ಲೋಕವನ್ನೆಲ್ಲಾ ಸುಡತೊಡಗಿದವು. (ಸಮುದ್ರ ಮಥನಕಾಲದಲ್ಲಿ ಈತನು ವಿಷಪಾನ ಮಾಡಿದ್ದನಂತೆ) ಆಗ ಶಂಕರನು ಆ ವಿಷವ ನ್ನೆಲ್ಲ ಪಾನ ಮಾಡಿ ದೇವತೆಗಳಿಗೆ ಪ್ರಸನ್ನವಾಗಲು, ದೇವತೆಗಳು ಸಂತೋಷದಿಂದ ಈ ಸ್ಥಳಕ್ಕೆ 'ವಿಷಪ್ರಹರಣಕ್ಷೇತ್ರ' ವೆಂದು ಹೆಸರಿಟ್ಟು ಅಲ್ಲಿ ಶಿವ-ವಿಷ್ಣು-ಪಾರ್ವತಿ ಯರನ್ನು ಸ್ಥಾಪನ ಮಾಡಿದರು. ಇದೇ ಗರಳಪುರಿ. ಅಥವಾ ಪರಶುರಾಮಕ್ಷೇತ್ರ ಲಕ್ಷ್ಮೀದೇವಿಯು ಶ್ರೀಮನ್ನಾರಾಯಣನನ್ನು ಇದೇ ಸ್ಥಳದಲ್ಲಿ ಮದುವೆಯಾದಳಂತೆ ಇಲ್ಲಿ 'ಮಣಿಕರ್ಣಿಕಾ' ಎಂಬ ಪವಿತ್ರವಾದ ತೀರ್ಥವೊಂದುಂಟು.

ಇಲ್ಲಿಯ ಶಿವಲಿಂಗಕ್ಕೆ ನಂಜುಂಡನೆಂಬ ಹೆಸರುಂಟಾಗಲು ಕಾರಣವೇನಂ ದರೆ—ಪೂರ್ವದಲ್ಲಿ ಮಹಾಪತಿವ್ರತೆಯಾದ 'ಸರ್ವಲಕ್ಷಣೆ' ಎಂಬ ಸ್ತ್ರೀಯಳು 'ಶಿವಧರ್ಮ'ನೆಂಬಬ್ರಾಹ್ಮಣನನ್ನು ಮದುವೆಯಾಗಿದ್ದಳು. ಆತನು ಬಹಳ ಕೋಪಿಷ್ಠ; ಮಾತು-ಮಾತಿಗೆ ನೆವ ತೆಗೆದು ಜಗಳಾಡುತ್ತಿದ್ದನು. ಒಂದು ದಿವಸ ಹೊಟ್ಟೆಗಿಲ್ಲದೆ

ರವೂ ಪರಮಾತ್ಮನದೇ ಎಂದು ದೃಢವಾಗಿ ನಂಬಿರುತ್ತಾರೆ ಸುಖವಾಗಲಿ-ದುಃಖವಾಗಲಿ, ಜಯವಾಗಲಿ-ಅಪಜಯವಾಗಲಿ, ಹುಟ್ಟಲಿ-ಸಾಯಲಿ ಎಲ್ಲವೂ ದೇವರ ಆಟವೆಂದೇ ಅವರ ತಿಳುವಳಿಕೆ. ಅಂದಮೇಲೆ ಕನಕನು ಇಂಥ ಮದ್ದಾನೆಗೆ ಹೆದರುವನೆ? ಅದನ್ನು ನೋಡಿದ ಕೂಡಲೆ ನಿಂತು ಬಿಟ್ಟನು. ಆನೆಯು ತೇಕುತ್ತ ಹತ್ತರ ಬಂದಿತು. ಸತ್ಪುರುಷರ ಹೃದಯವು ಬಹು ಕೋಮಲವಾದದ್ದು. ಆಯಾಸದಿಂದ ತೇಕುತ್ತ ಬರುವ ಆನೆಯನ್ನು ನೋಡಿ ಕನಕನ ಅಂತಃಕರುಣವು ಕರಗಿತು. ಆಗ ಆನೆಯ ಮೋರೆಯ ಮೇಲೆ ಕೈ ಎಳೆದು—ಎಲೈ ಗಜರಾಜಾ ಇಷ್ಟೇಕೆ ಧಾವಿಸಿ ಓಡಿ ಬಂದಿ? ಎಷ್ಟು ಆಯಾಸವಾಗಿರುವದಲ್ಲಾ? ಸ್ವಲ್ಪ ವಿಶ್ರಾಂತಿಯನ್ನು ತಾಳು. ಎಂದು ಮಂದಹಾಸದಿಂದ ಮಾತನಾಡಿದನು.

"ಕರಡಿ ಕರುವಾಗುವದು ಉರಿ ಮಂಜು ಆಗುವದು | ಕರಿ ನಾಯಿಯಾಗುವದು ಕಂಡರೀಗ || ಭರದಿಂದ ಸುರಿವ ಮಳೆ ನಿಲ್ಲೆನಲು ನಿಲ್ಲುವದು | ನರಹರಿಯ ನಾಮಗಳ ನಂಬಿ ಪಠಿಪರಿಗೆ || ೧ || ಎಲ್ಲಿ ಭಯಗಳು ಹರಿಯ ಭಕುತರಿಗೆ ಇಲ್ಲಾ ||"

ಎಂಬ ದಾಸೋಕ್ತಿಯು ಸುಳ್ಳಲ್ಲ. ಆನೆಯು ತನ್ನ ಉದ್ಧತಭಾವವನ್ನು ಬಿಟ್ಟು, ಸೊಂಡಿಲವನ್ನು ಬಗ್ಗಿಸಿಕೊಂಡು ಅತಿ ವಿನಯದಿಂದ ನಿಂತುಕೊಂಡಿತು. ಆ ಕೂಡಲೆ ಕನಕಪ್ಪನು ಗಜರಾಜನ ಭಾವವನ್ನರಿತು, ಅಲ್ಲಿಯೇ ಒಂದು ಕೀರ್ತನವನ್ನು ಹೇಳಿದನು. * ಆನೆಯು ಕಣ್ಣುಮುಚ್ಚಿಕೊಂಡು ತಲೆಯಲ್ಲಾಡಿಸುತ್ತ ತದೇಕ

---

ಬಂದು ನೀರು ತಾರೆಂದು ಕೇಳಲು ತರುವದಕ್ಕೆ ಸ್ವಲ್ಪ ತಡವಾಯಿತು. ಇಷ್ಟಕ್ಕೇನೇ ಕೋಪಿಸಿಕೊಂಡು ಆಕೆಯನ್ನು ಹೊಡೆದು-ಬಡೆದು ತಾನೇ ಮನೆ ಬಿಟ್ಟು ಹೊರಟು ಹೋದನು, ಅನುಗಾಲವೂ ಈ ರೀತಿ ಕಷ್ಟಪಡುವವನ್ನು ಆ ಸಾಧ್ವಿಯು ತಾಳಲಾರದೆ ದೇಹವನ್ನೇ ಈಶ್ವರನಿಗೆ ಅರ್ಪಿಸಿಬಿಡಬೇಕೆಂದು ಯೋಚಿಸಿ ಅನ್ನದಲ್ಲಿ ನಂಜನ್ನು (ವಿಷವನ್ನು) ಬೆರಿಸಿ ಅದನ್ನು ಈಶ್ವರನಿಗೆ ನಿವೇದನ ಮಾಡಿ ತಾನೂ ಭುಂಜಿಸಿದಳು. ಈಶ್ವರಾನುಗ್ರಹದಿಂದ ವಿಷವು ಆಕೆಯನ್ನು ಬಾಧಿಸಲಾರದೆ ಹೋಯಿತು ಆಗ ಆ ಸ್ತ್ರೀಯಳು ನಂಜನ್ನು ಉಂಡ ಈ ನನ್ನನ್ನು ಬದುಕಿಸಿದೆಯಾದ ಕಾರಣ ನಿನಗೆ ನಂಜುಂಡನೆಂದು ಹೆಸರಿಡುವೆನೆಂದಳಂತೆ ಅದಕ್ಕೆ ಈಶ್ವರನು ಒಪ್ಪಿಕೊಂಡನಂತೆ.

* || ರಾಗ:—ಆನಂದಭೈರವಿ ಅಟತಾಳ. ||

ಆನೆ ಬಂದಿದಿಗೊ ಮದ್ದಾನೆ || ಪಲ್ಲ || ಜ್ಞಾನಿಗಳೊಳಾಡುವ ಪಟ್ಟದಾನೆ || ಅನುಪಲ್ಲ || ದೇವಕಿಯೊಳು ಪುಟ್ಟಿದಾನೆ ವಾಸುದೇವನ ಪೆಸರೊಳ್ಳಿತಂದ ಮ-

ಧ್ಯಾನವಾಗಿ ನಿಂತಿತು. ಕೀರ್ತನವನ್ನು ಮುಗಿಸಿ ಕನಕನು ಮುಂದೆ ನಡೆದನು. ಆನೆಯೂ ಇವನ ಬೆನ್ನು ಬಿಡಲೇ ಇಲ್ಲ. ಹಿಂದಿಂದೆ ಮೆಲ್ಲಮೆಲ್ಲನೆ ನಡೆಯಿತು. ಇಬ್ಬರೂ ಗರಳಪುರಿಯನ್ನು ಸೇರಿದರು. ಜನರಿಗೆ ಅತೀವ ಸೋಜಿಗವಾಯಿತು. ಇವರಾವ ಮಹಾತ್ಮರೋ ಆನೆಯನ್ನು ವಶಮಾಡಿಕೊಂಡು ಬಂದಿರುವರೆಂದು ಜನರು ಗುಂಪುಗುಂಪಾಗಿ ನೆರೆಯುತ್ತಿದ್ದರು. ಕನಕನು ನೆಟ್ಟಗೆ ನಂಜುಂಡೇಶ್ವರ ದೇವಾಲಯಕ್ಕೆ ಹೊರಟನು. ಆನೆಯೂ ಅಲ್ಲಿಗೆ ಬಂದು ನಿಂತಿತು. ಸ್ವಾಮಿಯ ಸೇವೆಯೆಲ್ಲ ಮುಗಿಯಿತು. ಕಡೆಗೆ ಆನೆಗೆ ಹೇಳಿದನು —"ಎಲೈ ಕರಿರಾಜಾ, ನೀನು ಇಲ್ಲಿಯೇ ಸ್ವಾಮಿಯ ರಥವಾಹನನಾಗಿ ಉತ್ಸವಕಾಲದಲ್ಲಿ ಸೊಂಡಿಲ ಮರ್ಯಾದೆ ಮಾಡುತ್ತ, ಕೊನೆಗೆ ಸಾಯುಜ್ಯವನ್ನು ಹೊಂದು." ಆನೆಯು ಕನಕಪ್ಪನ ಮಾತು ತನಗೆ ತಿಳಿಯಿತೋ ಏನೋ ಅನ್ನುವಂತೆ ತಲೆಯಲ್ಲಾಡಿಸಿತು. ಮುಂದೆ ಅದು ಕಾಡಿಗೆ ಹೋಗಲಿಲ್ಲ. ಕನಕನು ಮುಂದಕ್ಕೆ ಪ್ರಯಾಣಮಾಡಿದನು.

---

## ೧೫ನೇ ಕಥೆ.

### ಅನಂತಶಯನಕ್ಕೆ ಪ್ರಯಾಣ.



**ಕನಕನು** ದೇಶಸಂಚಾರ ಮಾಡುತ್ತ ಒಮ್ಮೆ ಅನಂತಶಯನಕ್ಕೆ ಬಂದನು. ಅನಂತಶಯನವೆಂದರೆ—ಮಲೆಯಾಳದ ರಾಜಧಾನಿಯಾದ ತ್ರಾವಣಕೋರವೆಂಬುದು. ಇಲ್ಲಿ ಪ್ರಸಿದ್ಧವಾದ ಅನಂತಶಯನನ ಗುಡಿ ಇರುವದು. ಆದ್ದರಿಂದ ಇದಕ್ಕೆ ಅನಂತಶಯನಕ್ಷೇತ್ರವೆಂದೂ ಹೇಳುವದುಂಟು. ಇಲ್ಲಿಯ ಅರಸನು ಬ್ರಹ್ಮಹತ್ಯಾದೋಷದಿಂದ ಬಹಳ ಕಷ್ಟಪಡುತ್ತಲಿದ್ದನು. ಅರಮನೆಯಲ್ಲಾದರೋ ರಾಜವೈದ್ಯರುಗಳಿಗೆ ಕಡಿಮೆಯಿರಲಿಲ್ಲ. ಜ್ಯೋತಿಷಿಗಳಿಗೆ ಕೊರತೆಯಿದ್ದಿಲ್ಲ. ಯಾರಿದ್ದರೇನು

---

ದ್ದಾನೆ | ಶ್ರೀ ವಾಸುದೇವನೆಂಬಾನೆ || ದೇವಿ ಗೋಪಿಯ ಗೃಹದೊಳಾಡುವ ಪುಟ್ಟಾನೆ || ೧ || ನೀಲವರ್ಣದ ನಿಜದಾನೆ ಸ್ವರ್ಣ ಮಾಲೆಗಳಿಟ್ಟು ಮೆರೆವ ಚಲುವಾನೆ | ಸ್ತ್ರೀಲೋಲನೆನಿಪ ಪಟ್ಟದಾನೆ | ದುಷ್ಟ ಕಾಳಿಂಗವೆಡೆಯ ತುಳಿದಾನೆ || ೨ || ಬಾಲೇಂದುಮುಖದ ಮರಿಯಾನೆ ಕದ್ದು ಪಾಲನ್ನು ಕುಡಿದ ಮರಿಯಾನೆ | ಕೈಲಿ ಗಿರಿಯನೆತ್ತಿದಾನೆ | (ಈ ಪದವು ಪೂರ್ಣವಾಗಿ ಸಿಕ್ಕಲಿಲ್ಲ)

ಮಾಡುವರು? “ಪ್ರಾಚೀನಕರ್ಮವು ಬಿಡಲರಿಯದು | ಯೋಚನೆಯ ಮಾಡಿ ಬಳಲುವುದೇಕೆ ಮನುಜಾ” | ಎಂಬ ದಾಸರಾಯರ ಉಕ್ತಿಯಂತೆ ಅರಸನ ಪ್ರಾಚೀನ ಕರ್ಮವನ್ನು ತಡೆಯಲು ಯಾರೂ ಶಕ್ತರಾಗಲಿಲ್ಲ. ಅವನು ಬರಬರುತ್ತ ಅತ್ಯಂತ ಕ್ಷೀಣನಾದನು. ಇದರಲ್ಲಿ ನನಗೆ ಉಳಿವಿಲ್ಲೆಂದೂ ನಿಶ್ಚಯಿಸಿದನು. ಕಡೆಗೆ ಒಂದು ದಿನ ಅನೇಕ ಬ್ರಾಹ್ಮಣರನ್ನೂ-ಜ್ಯೋತಿಷಿ-ಸಿದ್ಧಾಂತಿ ಮೊದಲಾದವರನ್ನೂ ಕರೆಯಿಸಿ—ತನ್ನ ಬೇನೆಯು ಎಂದಿಗೆ ನಿವೃತ್ತಿಯಾದೀತು ಎಂದು ಕೇಳಿದನು. ಆಗ ಪಂಡಿತರೆಲ್ಲರೂ ಯೋಚಿಸಿ ಹೇಳಿದರು. ‘ಎಲೈ ಅರಸನೇ ಅರಮನೆಯಲ್ಲಿ ಒಂದು ಗಂಟೆಯನ್ನು ಕಟ್ಟಿಸು. ಅದು ತನ್ನಿಂದ ತಾನೇ ಎಂದು ಬಾರಿಸುವದೋ ಅಂದೇ ನಿನ್ನ ರೋಗವು ಪರಿಹಾರವಾಗುವದು’ ಎಂದು ಏನು ಚಮತ್ಕಾರವಿದು? ಆ ಗಂಟೆಯು ತನಗೆ ತಾನೇ ಎಂದು ಬಾರಿಸಬೇಕು? ರಾಜನ ರೋಗವು ಎಂದು ಪರಿಹಾರವಾಗಬೇಕು? ಇದೊಂದು ಮೂಢ ಕಲ್ಪನೆಯಲ್ಲವೇ? ಈಗಿನ ೨೦ನೇ ಶತಮಾನದಲ್ಲಿಯ ಸುಶಿಕ್ಷಿತರಾದ ನಾಗರಿಕರೆದುರಿಗೆ ಇಂಥ ಮಾತನ್ನು ಹೇಳಿದ್ದರೆ ಅವರು ಹಾಸ್ಯ ಮಾಡಿ ನಕ್ಕು ಬಿಡುತ್ತಿದ್ದರು ಆದರೆ ಅರಸನು ಪಂಡಿತರ ಮಾತನ್ನು ಅಲ್ಲಗಳೆಯಲಿಲ್ಲ. ಕೇವಲ ವಿಶ್ವಾಸವಿಟ್ಟು ಅವರು ಹೇಳಿದಂತೆಯೇ ಮಾಡಿಸಿ ಅನ್ನ ಸಂತರ್ಪಣೆಯನ್ನು ನಡಿಸಿದನು. ತಿಂಗಳಾಯಿತು, ಎರಡು ತಿಂಗಳಾಯಿತು. ಆರು ತಿಂಗಳೂ ಮುಗಿಯಿತು. ಕಡೆಗೆ ಒಂದು ವರ್ಷವೂ ಸಂದಿಹೋಯಿತು. ಅರಸನ ರೋಗವು ಕಡಿಮೆಯಾಗಲೇ ಇಲ್ಲ. ಮತ್ತೊಮ್ಮೆ ಬ್ರಹ್ಮಸಭೆಯನ್ನು ಕೂಡಿಸಿ ಕೇಳಿದನು. ಆಗ ಅವರು—‘ಇನ್ನು ಹನ್ನೊಂದು ದಿವಸದಲ್ಲಿ ನಿನ್ನ ರೋಗವು ಗುಣವಾಗುವಂತೆ ಜಪ-ತಪಾನುಷ್ಠಾನಗಳನ್ನು ಮಾಡುವೆವು’ ಎಂದು ಹೇಳಿದರು. ಅರಸನಿಗೆ ತುಸ ಸಮಾಧಾನವಾಯಿತು. ನಾಲ್ಕೆಂಟು ದಿನಗಳು ಕಳೆದು ಹೋದವು. ಬ್ರಾಹ್ಮಣರ ಅನುಷ್ಠಾನಗಳು ಒಂದೇ ಸವನೆ ನಡೆದಿದ್ದವು. ಆಗ ಒಂದು ದಿವಸ ಅರಮನೆಯ ಮುಸುರೆ ತಿಕ್ಕುವ ಹೆಂಗುಸೊಬ್ಬಳು ಮುಸರೇ ಪಾತ್ರೆಗಳನ್ನು ತಕ್ಕೊಂಡು ಊರ ಮುಂದಿನ ತಟಾಕಕ್ಕೆ ಬಂದಿದ್ದಳು. ಅದೇ ಹೊತ್ತಿಗೆ ನಮ್ಮ ಕನಕಪ್ಪನು ಒಂದು ಒಡಕ ತಂಬೂರಿಯನ್ನು ಕೈಯಲ್ಲಿ ಹಿಡಿದುಕೊಂಡು ದೇವರ ಭಜನೆ ಮಾಡುತ್ತ ಅದೇ ತಟಾಕದ ಹತ್ತರ ಬಂದನು. ಆತನಿಗೆ ಹಸಿವು-ತೃಷೆಗಳ ಬಾಧೆಯು ಬಹಳವಾಗಿತ್ತು. ಮುಸುರೆ ತಿಕ್ಕುವಳನ್ನು ಕಂಡು—ಅಮ್ಮಾ ನಿನ್ನಲ್ಲಿ ತಿನ್ನಲಿಕ್ಕೆ ಏನಾದರೂ ಇದ್ದರೆ ಕೊಡಬಾರದೇ, ಎಂದು ಕೇಳಿದನು. ಹೆಂಗಸು ಮೋರೆಯನ್ನು ಮೇಲಕ್ಕೆತ್ತಿ ನೋಡಿದಳು. ಕನಕನು ಕಣ್ಣಿಗೆ ಬಿದ್ದನು.

ಆಗ ಅವಳು—ಸ್ವಾಮೀ! ನನ್ನ ಹತ್ತರ ಏನೂ ಇಲ್ಲ. ತುಸ ಗಂಜಿ ಮಾತ್ರ ಇದೆ. ಬೇಕಾದರೆ ಕೊಡುತ್ತೇನೆಂದಳು. ಕನಕನು ಅದನ್ನೇ ಕೊಡು ಎಂದು ಬೊಗಸೆಯೊಳಗೆ ಹಾಕಿಸಿಕೊಂಡು ಕುಡಿದು, ಹೆಚ್ಚಾದದ್ದನ್ನು ಮೊಳಕೈಯಿಂದ ಬಿಟ್ಟುಬಿಟ್ಟನು. ಅದೊಂದು ಹಳ್ಳದೋಪಾದಿ ಹರಿದು ಹೋಯಿತು. ಹಿಂದಕ್ಕೆ ಶ್ರೀಕೃಷ್ಣನು ವಿದುರನ ಮನೆಯಲ್ಲಿ ಒಂದು ತಂಬಿಗೆ ಹಾಲು ಕುಡಿದು ಕೌರವನ ಮನೆಯ ಬಾಗಿಲ ವರೆಗೂ ಹಾಲಿನ ಹಳ್ಳವನ್ನೇ ಹರಿಸಿ ಬಿಟ್ಟನೆಂದು ಓದಿದ್ದೆವು. ಕೇಳಿದ್ದೆವು. ಅದರಂತೆಯೇ ಆತನ ಭಕ್ತನಾದ ಕನಕನು ಒಂದು ಗಂಜಿಯ ಹಳ್ಳವನ್ನು ಹರಿಸಿ ಬಿಟ್ಟಿರುವನು ಅದನ್ನು ನೋಡಿ ಮಸುರಿ ತಿಕ್ಕುವವಳು ಆಶ್ಚರ್ಯಭರಿತಳಾದಳು. ಇವರಾರೋ ಮಹಾತ್ಮರೆಂದು ತಿಳಿದುಕೊಂಡಳು. ಕೂಡಲೆ ಮೇಲಕ್ಕೆದ್ದು ಬಂದು ಸಾಷ್ಟಾಂಗ ಹಾಕಿ—ಸ್ವಾಮೀ! ನಮ್ಮ ಮಹಾರಾಜನು ರೋಗದಿಂದ ಅತ್ಯಂತ ಕ್ಷೀಣವಾಗಿರುವನು ಆತನ ರೋಗವು ಹ್ಯಾಗೆ ಹೋದೀತು? ದಯಮಾಡಿ ನೀವಾದರೂ ಅಲ್ಲಿಯ ವರೆಗೆ ಬಂದು ನೋಡಿದರೆ ನೆಟ್ಟಗಾದೀತು? ಎಂದು ಬೇಡಿಕೊಂಡಳು. ಕನಕನು ಯೋಚನೆ ಮಾಡಿ ಎಲ್ಲ ಸಂಗತಿಯನ್ನು ತಿಳಿದುಕೊಂಡನು.—"ಅವ್ವಾ ನಿಮ್ಮ ಮಹಾರಾಜನ ಅರಮನೆಯಲ್ಲಿ ಒಂದು ಗಂಟೆಯು ಇರುವದು ಈ ಹೊತ್ತು ನೀನು ಅಲ್ಲಿಗೆ ಹೋದ ಕೂಡಲೆ ಅದು ತಾನಾಗಿ ಬಾರಿಸುವದು ಆಗಲೇ ಆತನ ರೋಗವು ಪರಿಹಾರವಾಯಿತೆಂದು ತಿಳಿ." ನಾವು ಅಲ್ಲಿಯ ವರೆಗೆ ಬರಲಿಕ್ಕೆ ನಮ್ಮಲ್ಲಿ ಅಂಥದೇನಿರುವದು? ನಾವೊಬ್ಬರು ಬಡದಾಸರು. ಅರಮನೆಯಲ್ಲಿ ಬರತಕ್ಕ ಯೋಗ್ಯತೆಯು ನಮ್ಮದಲ್ಲ ಎಂದು ನುಡಿದು ಮುಂದೆ ಹೊರಟನು.

ಮುಸುರಿ ತಿಕ್ಕುವವಳ ಆನಂದಕ್ಕೆ ಎಣೆಯೇ ಇಲ್ಲ. ಅವಳು ಜಾಗ್ರತೆಯಾಗಿ ಮುಸರೆ ತಿಕ್ಕಿಕೊಂಡು ಅರಮನೆಗೆ ಹೊರಟಳು. ಒಳಗೆ ಕಾಲಿಡುವದೊಂದೇ ತಡ ಅಲ್ಲಿದ್ದ ಗಂಟೆಯು ಢಣಲ್ ಢಣಲ್ಲೆಂದು ತಾನಾಗಿಯೇ ಮೂರುಸಾರೆ ಬಾರಿಸಿತು. ಆಕೆ ಕುಣಿದಾಡಹತ್ತಿದಳು. ಕಣ್ಣುಗಳಲ್ಲಿ ಆನಂದಬಾಷ್ಪಗಳ ಕೋಡಿ ಹರಿಯಿತು ಇನ್ನೇನು! ನಮ್ಮ ಮಹಾರಾಜನ ರೋಗವು ವಾಸಿಯಾಯಿತೆಂದು ಆಕೆಗೆ ಅಷ್ಟು ಸಂತೋಷ. ಮಹಾರಾಜನಿಗೆ ಈ ಸುದ್ದಿಯೇ ಗೊತ್ತಿಲ್ಲ. ಬ್ರಾಹ್ಮಣರಾದರೋ ಹನ್ನೊಂದು ದಿವಸದ ಸದುವನ್ನು ಮಾಡಿ ಕೊಟ್ಟಿದ್ದರು. ಅದಕ್ಕೆ ಇನ್ನೂ ಎರಡು ದಿನವಿರುವಾಗಲೇ ಗಂಟೆ ಬಾರಿಸಲಿಕ್ಕೆ ಕಾರಣವೇನು? ಎಂದು ಯೋಚಿಸಿ ಬ್ರಾಹ್ಮಣರನ್ನು ಕರೆಯಿಸಿದನು, ಗಂಟೆಯ ಧ್ವನಿಯನ್ನು ಕೇಳಿದ

ಕೂಡಲೆ ಎಲ್ಲರೂ ಆನಂದಸಾಗರದಲ್ಲಿ ಮುಳುಗಿಹೋದರು. ಅರಮನೆಯೊಳಗಿನ ಆನಂದಕ್ಕಂತೂ ಪಾರವೇ ಇದ್ದಿಲ್ಲ. 'ಗಂಟೆ ಬಾರಿಸಿತು' 'ರಾಜನಿಗೆ ರೋಗವು ವಾಸಿಯಾಯಿತು' ಎಂಬ ಶಬ್ದಗಳೇ ಎಲ್ಲರ ಬಾಯಿಯಲ್ಲಿ ತುಂಬಿಹೋದವು. ಅಷ್ಟರಲ್ಲಿ ಬ್ರಹ್ಮಸಭೆಯು ನೆರೆಯಿತು. ಗಂಟೆ ಬಾರಿಸಿದ ಕಾರಣ ಮಾತ್ರ ಯಾರಿಗೂ ತಿಳಿಯಲಿಲ್ಲ. ಅಷ್ಟರಲ್ಲಿ ಮುಸುರಿ ತಿಕ್ಕುವವಳು ತಾನು ತಂದ ಸುದ್ದಿಯನ್ನು ಅರಮನೆಯಲ್ಲೆಲ್ಲ ಹರಡಿಬಿಟ್ಟಿದ್ದಳು. ಅದು ಮಹಾರಾಜನ ಕಿವಿಗೂ ಬಿದ್ದಿತು. ಕೂಡಲೆ ಮಹಾರಾಜನು ಅತೀವ ಸೋಜಿಗದಿಂದ ತಾನೇ ಹೊರಹೊರಟನು. ಆ ಮಹಾತ್ಮರು ಯಾರು? ಅವರನ್ನು ಮೊದಲು ತೋರಿಸೆಂದು ಹೇಳಿದನು. ಮುಸುರೆ ತಿಕ್ಕುವವಳು ಮುಂದೆ ಮುಂದೆ ಹೊರಟಳು. ಹಿಂದೆ ರಾಜನು ಸಾವಿರಾರು ಜನರನ್ನು ಕೂಡಿಕೊಂಡು ಕಾಲುನಡೆಯಿಂದಲೇ ನಡೆದಿರುವನು ತಟಾಕದ ಹತ್ತರ ಹೋದರು. ಅತ್ತಿತ್ತ ನೋಡಿ ನೋಡುವಷ್ಟರಲ್ಲಿ ಕನಕನು ಒಂದು ಗಿಡದ ನೆರಳಿಗೆ ಕುಳಿತಿದ್ದನು. ಮುಸುರೆ ತಿಕ್ಕುವವಳ ಸೂಚನೆಯಂತೆ ಈತನೇ ಆ ಮಹಾತ್ಮನೆಂದು ತಿಳಿದು ಸರ್ವರೂ ಸಾಷ್ಟಾಂಗ ಹಾಕಿದರು. ಕನಕನಿಗೆ ದಿಗ್ಭ್ರಮೆಯಾದಂತಾಯಿತು. ಇಷ್ಟು ಜನರು ಇಲ್ಲಿಗೇಕೆ ಬಂದರು? ನನ್ನನ್ನೇಕೆ ಇಷ್ಟು ಹೊಗಳುತ್ತಿರುವರು? ಇದರ ಮೂಲವೇ ಅವನಿಗೆ ತಿಳಿಯದಂತಾಯಿತು. ಅರಸನು ಸಂಗತಿಯನ್ನೆಲ್ಲ ನಿವೇದಿಸಿದನು. ಕನಕನಿಗೆ ಹೊಳೆಯಿತು. ಆಗ ಆತನು:—ಸ್ವಾಮಿ, ನಿಮ್ಮ ರೋಗವನ್ನು ವಾಸಿಮಾಡಲು ನಾನೆಷ್ಟರವನು? ಸರ್ವತಂತ್ರ ಸ್ವತಂತ್ರನಾದ ಆ ಸ್ವಾಮಿಯೇ ಹದಿನಾಲ್ಕು ಲೋಕವನ್ನು ಸಂರಕ್ಷಿಸತಕ್ಕವನು. ಎಲ್ಲ ಕೆಲಸಗಳೂ ಆತನ ದಯದಿಂದಲೇ ಆಗತಕ್ಕವು, ಎಂದು ವಿನಯದಿಂದ ನುಡಿದನು. ಎಲ್ಲರೂ ಅಲ್ಲಿ ಹರಿಯುತ್ತಿರುವ ಗಂಜಿಯ ಹಳ್ಳವನ್ನು ನೋಡಿ ಪರಮಾಶ್ಚರ್ಯಭರಿತರಾಗಿಹೋದರು. ಮಹಾರಾಜನು ಆಗಲೇ ಅದಕ್ಕೆ ಕಲ್ಲಿನಿಂದ ಒಡ್ಡು ಕಟ್ಟಿಸಿ, ಕನಕನ ಕೊಳವೆಂದು ಹೆಸರಿಟ್ಟು, ಕನಕಪ್ಪನನ್ನು ಅತ್ಯಾಗ್ರಹದಿಂದ ಅರಮನೆಗೆ ಕರಕೊಂಡು ನಡೆದನು ಅರಮನೆಯಲ್ಲಿ ಆನಂದೋತ್ಸವಗಳು ಎಂಟುದಿನಗಟ್ಟಲೆ ಸಾಗಿದವು. ನಂತರ ಮಹಾರಾಜನು ಕನಕನಿಗೆ ದೊಡ್ಡ ಸಂಭಾವನೆಯನ್ನು ಕೊಟ್ಟು ಕಳಿಸಿದನು. ಜಗತ್ತಿನಲ್ಲಿ ಭಗವದ್ಭಕ್ತರ ಸ್ವರೂಪವು ಹೇಗಿರುವದೆಂಬದನ್ನು ತಿಳಿಯುವದು ಬಲು ಕಷ್ಟ. ಅದು ಎಲ್ಲರಿಗೂ ಸಾಮಾನ್ಯವಾಗಿ ತಿಳಿಯಲು ಸಾಧ್ಯವಿಲ್ಲ. ಅಂತರಂಗದಲ್ಲಿ ಪರಮಾತ್ಮನನ್ನು ಕಾಣುತ್ತಿರುವರಾದರೂ ಬಹಿರಂಗದಲ್ಲಿ ಹುಚ್ಚರೋಪಾದಿಯಲ್ಲಿ ತೋರುತ್ತಿರುವರು. ಇಂಥ ಹುಚ್ಚರನ್ನು ಭಗವಂತನಲ್ಲಿ

ಭಕ್ತಿಪರವಶರಾದ ಹುಚ್ಚರೇ ಅರಿಯುವರಲ್ಲದೆ ನಮ್ಮಂಥ ಹುಚ್ಚರು ಎಂದಿಗೂ ತಿಳಿಯಲಾರೆವು. ಇವರ ಚರ್ಯೆಯನ್ನು ಒಬ್ಬ ಭಕ್ತಾಗ್ರೇಸರರು ಹೀಗೆ ವರ್ಣಿಸಿರುವರು:—

ಬೂದಿ ಮುಚ್ಚಿದ ಕೆಂಡಗಳಿಪ್ಪರು | ಈ ಧರೆಯ ಮೇಲೆ ಶ್ರೀ ಹರಿ ಭಕ್ತ ಜನರು || ಪಲ್ಲ || ಅಂಗ ನೋಡಲು ಅಷ್ಟವಕ್ರರಾಗಿಪ್ಪರು | ಕಂಗಳಿಂದಲಿ ನೋಡೆ ಘೋರತರರು || ಮಂಗಳಾಂಗನ ಅಂತರಂಗದಲಿ ಭಜಿಸುತ್ತ | ಹಿಂಗದೆ ಸಂತಜನ ಸಂಗದೊಳಿಹರು || ೧ || (ವಿಜಯದಾಸರು)

---

## ೧೬ನೇ ಕಥೆ.

## ದೇವರನ್ನು ತನ್ನ ಕಡೆಗೆ ತಿರುಗಿಸಿದ್ದು.



ಈ ರೀತಿ ಕನಕನು ಅಲ್ಲಲ್ಲಿ ಹರಿದಾಸರೊಂದಿಗೆ ಸೇರಿ, ನಾಮ ಸಂಕೀರ್ತನ ಮಾಡುತ್ತಾ ಶ್ರೋತೃಗಳ ಮನಸ್ಸಿನಲ್ಲಿ ಪ್ರೇಮವನ್ನುಂಟುಮಾಡಿ ಅವರನ್ನು ಭಕ್ತಿಮಾರ್ಗಕ್ಕೆ ಎಳೆಯುತ್ತಾ ಅನೇಕ ಅಲೌಕಿಕ ಮಹಿಮೆಗಳನ್ನು ತೋರಿಸುತ್ತ ತೀರ್ಥಕ್ಷೇತ್ರಗಳನ್ನು ಸಂಚರಿಸಿ ಶ್ರೀ ವ್ಯಾಸರಾಯ ಸ್ವಾಮಿಗಳವರ ಇದ್ದಲ್ಲಿಗೆ ಬಂದು ಸೇರಿದನು. ಅವರೂ ಆಗ ಸಂಚಾರದಲ್ಲಿಯೇ ಇದ್ದರು. ಅವರ ಕೂಡ ಕನಕನು ಮತ್ತೊಮ್ಮೆ ಉಡುಪಿಗೆ ಹೋದನು. ಶ್ರೀ ಕೃಷ್ಣಮೂರ್ತಿಯ ಗುಡಿಯಲ್ಲಿ ವಾದಿರಾಜ ಸ್ವಾಮಿಗಳವರ ದೇವತಾರ್ಚನೆಯು ನಡೆದಿತ್ತು. ಎಡ ಬಲದಲ್ಲಿ ಸೇವಕರು ಕೈ ಕಟ್ಟಿಕೊಂಡು ನಿಂತಿದ್ದರು. ಬ್ರಾಹ್ಮಣರ ವೇದಘೋಷವು ಸಮುದ್ರಘೋಷದಂತೆ ಕೇಳಿಸುತ್ತಿತ್ತು. ಸುವಾಸಿನಿಯರಾದ ಸ್ತ್ರೀಯರು ಒತ್ತಟ್ಟಿಗೆ ನಿಂತಿದ್ದರು. ಗುಡಿಯಲ್ಲೆಲ್ಲ ಕಸ್ತೂರಿ ಕೇಶರಗಳ ವಾಸನೆಯೇ ತುಂಬಿದೆ. ಎಲ್ಲಲ್ಲಿಯೂ ರಂಗವಲ್ಲಿಗಳು, ಧೂಪಗಳು ದೀಪಗಳು ಇವೇ ಕಾಣಿಸುತ್ತವೆ. ಘಂಟಾನಾದವಂತೂ ಎಡೆಬಿಡದೆ ನಡೆದಿತ್ತು. ಹೊರಗಡೆಯಲ್ಲಿ ಚೌಘಡೆಯು ಬಾರಿಸುತ್ತಲಿತ್ತು. ಇಂಥ ವೈಭವವನ್ನು ನೋಡಲಿಕ್ಕೆ ತಾನೇ ಯಾರು ಇಚ್ಛಿಸಲಿಕ್ಕಿಲ್ಲ? ಸಾವಿರಾರು ಜನರ ಸಂದಣಿಯು ಕೂಡಿತ್ತು. ಕನಕನಂತೂ ಕೇವಲ ಹರಿಕಿಂಕರನು. ಅಂದಮೇಲೆ ಕೇಳುವದೇನು? ದೂರ ಹೊರಬಾಗಿಲಲ್ಲಿಯೇ ದೇವರೆದುರಾಗಿ ನಿಂತು ಎವೆಹಾಕದೆ

ಪೂಜೆಯನ್ನು ನೋಡುತ್ತಿದ್ದನು. ಕನಕನ ಮೇಲೆ ಹೊಟ್ಟೆಕಿಚ್ಚುಪಡುತ್ತಿದ್ದ ಬ್ರಾಹ್ಮಣರು ಇವನು ನಿಂತದ್ದನ್ನು ಎಲ್ಲಿಯವರೆಗೆ ನೋಡಿದ್ದಿಲ್ಲವೋ, ಅಲ್ಲಿಯವರೆಗೆ ಯಾವ ಗದ್ದಲವೂ ನಡೆದಿರಲಿಲ್ಲ ಮುಂದೆ ಒಮ್ಮಿಂದೊಮ್ಮೆ ಮಹಾದ್ವಾರದ ಬಾಗಿಲವು ಮುಚ್ಚಿಹೋಯಿತು ಕನಕನಿಗೆ ಪೂಜೆಯನ್ನು ಕಾಣಗೊಡಬಾರದೆಂಬ ಉದ್ದೇಶದಿಂದಲೇ ಅವನ ಮೇಲೆ ಬೆಂಕಿಯನ್ನು ಕಾರುತ್ತಿದ್ದ ಮರಿಕರು ಈಗ ಬಾಗಿಲ ಹಾಕಿದರೆಂದು ನಾವೇಕೆ ಹೇಳಬೇಕು? ವಾಚಕರು ತಾವಾಗಿಯೇ ಊಹಿಸಿರುವರು. ಆದರೂ ಬಾಗಿಲ ತೆರೆಯಹೇಳದೆ ಶ್ರೀಗಳವರು ಸುಮ್ಮನಿದ್ದದ್ದು ಮಾತ್ರ ಅನ್ಯಾಯವೆಂದು ನ್ಯಾಯಪಕ್ಷಪಾತಿಗಳಾದ ನಮ್ಮ ವಾಚಕರು ಯೋಚಿಸುತ್ತಿರಬಹುದು. ವಾಚಕ ಮಹಾಶಯ! ಹಾಗೇನೂ ಯೋಚಿಸಬೇಡಿರಿ ಭಕ್ತನ ಮಹಿಮೆಯು ಲೋಕದಲ್ಲಿ ಪ್ರಸಿದ್ಧವಾಗಬೇಕೆಂದೇ ಅವರು ಸುಮ್ಮನಿದ್ದರೆಂಬದು ನಿಮಗೆ ಮುಂದೆ ಗೊತ್ತಾಗುವದು. ಹಾಗಾದರೆ ನಾವೀಗ ಕನಕನಿದ್ದಲ್ಲಿಗೆ ತುಸು ಹೋಗೋಣ ನಡೆಯಿರಿ.

ಬಾಗಿಲು ಹಾಕಿದ್ದನ್ನು ನೋಡಿದ ಕೂಡಲೆ ಕನಕನು ಗಾಬರಿಯಾಗಿ ನಿಂತನು. ಶ್ರೀಕೃಷ್ಣಮೂರ್ತಿಯನ್ನ ನೋಡುವದಕ್ಕೆ ಎರವಾದೆನಲ್ಲಾ ಎಂದು ಮನಸ್ಸು ಕುದಿಯಹತ್ತಿತು. ಇನ್ನೆತ್ತ ಹೋದರೆ ದೇವರ ದರ್ಶನವಾದೀತೆಂಬುದೇ ಅವನ ಯೋಚನೆ. ಕಡೆಗೆ ಉಪಾಯಾಂತರವಿಲ್ಲದೆ ಗುಡಿಯ ಹಿಂಭಾಗದ ಕಿಡಿಕಿಯ ಹತ್ತರ ನಿಂತು ಪರಮಾತ್ಮನನ್ನು ಪ್ರೀತಿಪುರಸ್ಸರವಾಗಿ ನುತಿಸತೊಡಗಿದನು. *

---

(ಕನಕನು ದೇವರನ್ನು ನುತಿಸಿದ್ದು.)

ರಾಗ—ಮುಖಾರಿ ಏಕತಾಳ.

ತೊರೆದು ಜೀವಿಸಬಹುದೆ ಹರಿನಿಮ್ಮ ಚರಣವ | ಬರಿದೆ ಮಾತ್ಯಾಕಿನ್ನು ಅರಿತುಪೇಳುವೆನಯ್ಯ || ಪ || ಕೈಪಿಡಿದೆನ್ನನು ಕಾಯೊ ಕರುಣಾನಿಧೇ ||ಅ. ಪ|| ತಾಯಿ-ತಂದೆಯ ಬಿಟ್ಟು ತಪವ ಮಾಡಲು ಬಹುದು | ದಾಯಾದಿ ಬಂಧುಗಳ ಬಿಡಲುಬಹುದು || ರಾಯ ಮುನಿದರೆ ರಾಜ್ಯವ ಬಿಡಲು ಬಹುದು | ಕಾಯಜಪಿತ ನಿಮ್ಮಡಿಯ ಬಿಡಲಾಗದೊ || ೧ || ಒಡಲು ಕೆಟ್ಟದರೆ ಅನ್ನವ ಬಿಡಬಹುದು | ಪಡೆದ ಕ್ಷೇತ್ರವ ಬಿಟ್ಟು ಹೊರಡಬಹುದು||ನುಡಿದಿಮಕ್ಕಳ ಕಡೆಗೆ ತೊಲಗಿ ಬಿಡಲುಬಹುದು ಕಡಲೊಡೆಯ ನಿಮ್ಮಡಿಯ ಘಳಿಗೆ ಬಿಡಲಾಗದು || ೨ || ಪ್ರಾಣವ ಪರರಿಗೆ ಬೇಡಿದರೆ ಕೊಡಬಹುದು | ಮಾನಾಭಿಮಾನವ ತಗ್ಗಿಸಬಹುದು || ಪ್ರಾಣದಾಯಕನಾದ ಆದಿಕೇಶವರಾಯ | ಜಾಣ ಶ್ರೀಕೃಷ್ಣ ನಿಮ್ಮಡಿಯ ಬಿಡಲಾಗದು || ೩ ||

ಆಹಹಾ! ಆಗ ನಡೆದ ಚಮತ್ಕಾರವನ್ನೇನು ಹೇಳಬೇಕು? ಒಬ್ಬರಿಗೂ ದೇವರ ಮೋರೆಯೇ ಕಾಣಿಸದು. ಇದೇನಾಗಿದ್ದೀತೆಂದು ಹೌಹಾರಿ ನೋಡುತ್ತಾರೆ! ಪೂರ್ವಮುಖವಾಗಿದ್ದ ದೇವರು ಪಶ್ಚಿಮಕ್ಕೆ ಮೊಗದಿರುವಿದ್ದನು. ಕನಕನಿಗೆ ಆ ‡ ಕಿಂಡಿಯಿಂದಲೇ ಸ್ವಾಮಿಯು ದರ್ಶನವಾಯಿತು. ಅವನು ಆನಂದಸಾಗರದಲ್ಲಿ ಮುಳುಗಿದನು.

ಕೂಡಲೆ ಶ್ರೀಗಳವರು ಅತ್ಯಂತ ಸಂತೋಷದಿಂದ ಭಲಾ ಕನಕಾ! ಭಲಾ ಕನಕಾ! ಧನ್ಯಧನ್ಯ! ನೀನೆಷ್ಟು ಪುಣ್ಯಶಾಲಿಯೋ ಎಂದು ಸೊಲ್ಲು ಸೊಲ್ಲಿಗೆ ನುಡಿಯುತ್ತ ದೇವರೆದುರಿನಲ್ಲಿ ಬಂದು ಕುಳಿತು ಪೂಜಿಸ ಹತ್ತಿದರು. ವಾಚಕರೇ! ಈ ಅದ್ಭುತವನ್ನು ನೋಡಿದ ಜನರ ಮನಸ್ಸಿನಲ್ಲಿ ಆಗ ಹ್ಯಾಗಾಗಿದ್ದೀತು? ಪ್ರತ್ಯಕ್ಷ ದೇವರನ್ನೇ ಕಂಡಷ್ಟು ಸಂತೋಷವಾಗಿರಲಿಕ್ಕಿಲ್ಲವೆ? ಆಗಲಿಕ್ಕೆ ಬೇಕು. ಸಂಶಯವ್ಯಾತಕ್ಕೆ? ಕೂಡಲೆ ಗೊಂದಲವೆಬ್ಬಿಸಿದವರು ಗಲ್ಲ ಗಲ್ಲ ಬಡಿದುಕೊಂಡರು. ನಾವು

ರಾಗ—ಕಾಂಬೋಧಿ ಝಂಪತಾಳ.

ಬಾಗಿಲನು ತೆಗಿಸಿ ಸೇವೆಯನು ಕೊಡು ಹರಿಯೇ | ಕೂಗಿಡುವ ಧ್ವನಿ ಕೇಳ್ವುದಿಲ್ಲವೇ ದೊರೆಯೇ || ಪ || ಪರಮಪದದೊಳಗೆ ವಿಷಧರನ ತಲ್ಪದಲಿ ನೀ | ಸಿರಿಸಹಿತ ಕ್ಷೀರವಾರಿಧಿಯೊಳಿರಲು || ಕರಿರಾಜ ಕಷ್ಟದಲಿ ಆದಿಮೂಲವು ಎಂದು | ಸ್ಮರಿಸಲಾಕ್ಷಣ ಬಂದು ಪೊರೆದೆ ಶ್ರೀಹರಿಯೇ || ೧ || ಕಡುಕೋಪದಿಂ ಖಳನು ಖಡುಗವನು ಪಿಡಿದು ನಿ | ನ್ನೊಡೆಯ ನೆಲ್ಲಿಹನೆಂದು ಸ್ತಂಭ ಬಡಿಯೇ || ದೃಢ ಭಕ್ತಿಶಿಶುವು ಕಂಗೆಡದೆ ನಿನ್ನನು ಕರೆಯೆ | ಘುಡಿಘುಡಿಸಿ ಸ್ತಂಭದಿಂ ಬಂದೆ ನರಹರಿಯೇ || ೨ || ಯಮಸುತನ ರಾಣಿಗಕ್ಷಯ ವಸನವನು ಕೊಟ್ಟೆ | ಸಮಯದಲಿ ಅಜಮಿಳನ ದಯದಿ ಪೊರೆದೇ || ಸಮಯಾಸಮಯ ಉಂಟೆ ಭಕ್ತವತ್ಸಲನಿಗೆ | ಕಮಲಾಕ್ಷ ಕಾಗಿನೆಲೆಯಾದಿಕೇಶವನೆ || ೩ ||

‡ ಕನಕನು ದೇವರ ದರ್ಶನ ಮಾಡಿದ ಕಿಂಡಿಗೆ ಈಗಲೂ ಕನಕನ ಕಿಂಡಿಯೆಂತಲೇ ಕರೆಯುವರು. ದೇವರ ದರ್ಶನವು ಇಲ್ಲಿಯೇ. ಈ ಕಿಂಡಿಗೆ ಸರಿಯಾಗಿ ಎದುರಿಗೆ (ದೇವಾಲಯದ ಹೊರಗಡೆ ಪಶ್ಚಿಮದಿಕ್ಕಿನಲ್ಲಿ) ಸಾಧು-ಸಂತರು ಇರುವದಕ್ಕಾಗಿ ಒಂದು ಮಂಟಪವಿದೆ. ಅದಕ್ಕೂ ಕನಕನ ಮಂಟಪವೆಂದು ಹೆಸರು. ಈ ಮಂಟಪವು ಈಗ ಉತ್ತರಾದಿ ಮಠದ ಶ್ರೀಗಳವರ ಸ್ವಾಧೀನದಲ್ಲಿದೆ. ಅವರು ಇಲ್ಲಿ ೧೯೨೦ ನೇ ಇಸ್ವಿಯಿಂದಲೂ ಒಂದು ವೇದಾಂತ ಪಾಠಶಾಲೆಯನ್ನು ಸ್ಥಾಪಿಸಿರುವರು.

ಮಾಡಿದ್ದು ಅಪರಾಧವಾಯಿತೆಂದು ದೇವರಿಗೆ ಶರಣಾಗತರಾದರು ನೋಡಬಂದವರೆಲ್ಲರೂ ಓಡಿಹೋಗಿ ಕನಕನ ಕಾಲ್ಗೆರಗಿದರು. ಅಹಾ! ಕನಕನೆಂತಹ ಪುಣ್ಯವಂತನೋ! ಬ್ರಹ್ಮಾದಿಗಳಿಗೂ ಅಗೋಚರವಾದ ಮೂರ್ತಿಯನ್ನು ಕಣ್ಣಾರೆ ಕಂಡುಕೊಂಡನು. ಜಗತ್ಪಾಲಕನ ಮಹಿಮೆಯು ಅಪಾರವಾದದ್ದು. ಆತನ ದಾಸರಾದವರು ಬೇಕಾದದ್ದನ್ನು ಮಾಡಬಲ್ಲರು. ಅವರಿಗೆ ಯಾವದು ಈಡಾದೀತು?

ಹರಿಯು ದಾಸರಿಗಿನ್ನು ಸರಿಯುಂಟೆ | ನರಹರಿಯು ನಂಬಿದವರಿಗೆ ಕೇಡುಂಟೆ || ಪ || ಮೂರಿಜಾ ಕೈಯಲ್ಲಿ ನೀರು ಹೊರಿಸುವರು | ಮಸಣಿಯಾ ಕೈಯು ಕಸವ ಬಳಿಸುವರು || ಘೋರ ಮೃತ್ಯುವಿನ ಕೈ ಛತ್ರ ಕಟ್ಟಿಸುವರು || ೧ ||

(ಪುರಂದರ ದಾಸರು)

ಎಂಬ ದಾಸೋಕ್ತಿಯು ಸುಳ್ಳಲ್ಲ.

---

## ೧೭ ನೆಯ ಕಥೆ.

## ತಿರುಪತಿಯಲ್ಲಿ ತೋರಿದ ಮಹಿಮೆ.

ಈ ಪ್ರಕಾರ ಕನಕನು ವ್ಯಾಸರಾಯರ ಶಿಷ್ಯನಾಗಿ ಸಂಚರಿಸುತ್ತಿರಲು, ಆತನನ್ನು ತಿರುಪತಿಗೆ ಕಳಿಸಿಕೊಡಬೇಕೆಂದು ಶ್ರೀಗಳವರಿಗೆ ಸ್ವಪ್ನವಾಯಿತು ಹ್ಯಾಗೆ ಕಳಿಸಿಕೊಡುವದು? ಕನಕನನ್ನು ಬಿಟ್ಟು ಕಾಲ್ಗಳಿಗೆ ಇರಲಾರರು. ಆದರೇನು? ಬಿಟ್ಟುಬಿಡಬಹುದೇ? ಸ್ವಾಮಿಯ ಅಪ್ಪಣೆ. ಮೀರಲಿಕ್ಕೆ ಬರದು. ಬಿಸಿಯು ತುಪ್ಪವನ್ನು ಕುಡಿಯಲೂ ಬಾರದ; ಚೆಲ್ಲಲೂ ಬಾರದು; ಎಂಬ ವಿಚಾರ ಬಂತು. ಕಡೆಗೆ ಉಪಾಯವಿಲ್ಲದೆ ಹೋಗಹೇಳಿದರು

ಕನಕನಾದರೂ ಶ್ರೀಗಳವರ ಪಾದ ಸನ್ನಿಧಿಯನ್ನು ಅಗಲಲಾರದೆ, ಬಹಳವಾಗಿ ಹಳಹಳಿಸಿದನು. ಆಗಲವರು —ಎಲೋ ಕನಕಾ, ಸ್ವಾಮಿಯ ಅಪ್ಪಣೆಯು ಯಾದ ಮೇಲೆ ಮಾಡುವದೇನು? ಉಪಾಯವಿಲ್ಲ. ನಿನ್ನ ಮೇಲೆ ಆತನ ಅನುಗ್ರಹವು ಸಂಪೂರ್ಣವಾಗಿರುವದು. ಏನೂ ಚಿಂತೆ ಮಾಡಬೇಡ ನಡೆ, ಎಂದು ಉಪದೇಶ ಮಾಡಿ ಕಳುಹಿದರು. ಕನಕನು ಕಣ್ಣೀರು ಸುರಿಸುತ್ತ ಸ್ವಾಮಿಗಳಿಗೆ ಸಾಷ್ಟಾಂಗವೆರಗಿ:—ಜೀಯಾ! ಈ ದಾಸನ ಮೇಲೆ ಅನುಗ್ರಹ ಮಾಡಬೇಕು. ಇನ್ನು

ಹೋಗಿ ಬರುತ್ತೇನೆ ಹೀಗೆಂದು ಬೇಡಿಕೊಂಡು ಮೆಲ್ಲಮೆಲ್ಲನೆ ಹೊರಟನು. ಆಗಲೇ ತಿರುಪತಿಯಲ್ಲಿರುವ ಚಿನ್ನಪ್ಪನೆಂಬ ಪಾರುಪತ್ಯಗಾರನಿಗೂ ಕನಕನನ್ನು ಎದುರುಗೊಂಡು ಕರೆತರಬೇಕೆಂಬದಾಗಿ ಸ್ವಪ್ನವಾಯಿತು. ಅದರಂತೆ ಅವನು ಕನಕನ ಮಾರ್ಗ ನೋಡುತ್ತ ದೂರದವರೆಗೆ ಬಂದು ದಾರಿಯಲ್ಲಿ ನಿಂತನು. ಕನಕನು ಇಂಥವನೆಂಬದು ಅವನಿಗೆ ಗೊತ್ತಿಲ್ಲ. ಅವನೊಬ್ಬ ದೊಡ್ಡ ಮನುಷ್ಯನಾಗಿರಬಹುದು. ಬಹಳ ವೈಭವದಿಂದ ಬರುತ್ತಿದ್ದಾನು, ಇಷ್ಟೇ ಅವನ ತಿಳುವಳಿಕೆ. ಆದರಿಂದ ಸ್ವತಃ ಕನಕನೇ ಎದುರಿಗೆ ಬಂದರೂ ಅವನಿಗೆ ತಿಳಿಯಲಿಲ್ಲ. ಕನಕನಿಗಾದರೆ ಈ ಪಾರುಪತ್ಯಗಾರನನೇನು ಗೊತ್ತು? ಗೊತ್ತಿಲ್ಲ. ಇದ್ದರಿಂದ ಅವನೂ ಸುಮ್ಮನೆ ನಡೆದನು. ಬಿಸಿಲಿನ ತಾಪವಾದರೋ ಬಹಳವಾಯಿತು. ಆಗ ಚಿನ್ನಪ್ಪನು ಬೇಸತ್ತು ಹಿಂದಿರುಗಿ:— ಏನಯ್ಯಾ, ಈ ಮಾರ್ಗದಲ್ಲಿ ಕನಕನೆಂಬವನು ಬರುತ್ತಾನಂತೆ ಎಲ್ಲಿರುವನು? ಬಲ್ಲಿಯೋ? ಹಾಗು ಅವನ ಸಂಗತ ಎಷ್ಟು ಜನರಿರುವರು? ಇತ್ಯಾದಿ ಕನಕನಿಗೇ ಪ್ರಶ್ನೆ ಮಾಡಿದನು. ಅದನ್ನು ಕೇಳಿ ಕನಕನು ಮಹಾ ವಿನಯದಿಂದ—ಸ್ವಾಮಿ, ಕನಕನು ಒಂಟಿಗನಾಗಿದ್ದಾನೆ. ಸಂಗಡಿಗರಾರೂ ಕಾಣುವದಿಲ್ಲ. ಮುಂದೆ ಬರುವವರ ಹಿಂದೆಯೂ, ಹಿಂದೆ ಬರುವವರ ಮುಂದೆಯೂ ಇರಬಹುದು ನೋಡಿಕೊಳ್ಳಿರೆಂದನು. ಹರಿಯೊಲಿಮೆಯಾದವನಿಗೆ ಹೆರವರ ಹಂಗೇನು? ಚಿನ್ನಪ್ಪನಿಗಿದು ತಿಳಿಯಲಿಲ್ಲ. ಕೋಪವುಂಟಾಯಿತು. ಆಗಲವನು ಛೇ ಛೇ ಈವರೆಗೂ ನಾನು ಕನಕನಾವನೋ ದೊಡ್ಡಮನುಷ್ಯನಿರಬಹುದೆಂದು ತಿಳಿದಿದ್ದೆನು. ತಿರಕನಂತೆ ಹಂಚು ಬುಟ್ಟಿಯನ್ನು ಹೊತ್ತು ಒಬ್ಬನೇ ಬರುವವನನ್ನೇನು ಕರತರುವದು? ಇದರಿಂದ ನನಗೇ ಅಪಮಾನವು ಹೀಗೆಂದು ಯೋಚಿಸುತ್ತ ಮನೆಗೆ ಬಂದು ಕುಳಿತುಕೊಂಡನು. ಇತ್ತ ಕನಕನು ಹಾಗೆಯೇ ಹೊರಟು ಶ್ರೀ ವೆಂಕಟರಮಣನ ಗುಡಿಗೆ ಬಂದನು. ಗುಡಿಯಲ್ಲಿ ಕಾಲಿಟ್ಟಕೂಡಲೆ ಬೀಗ ಹಾಕಿದ ಬಾಗಿಲುಗಳು ತಮಗೆ ತಾವೇ ತೆರೆಯಲ್ಪಟ್ಟವು. ಘಂಟೆಗಳು ಬಾರಿಸಹತ್ತಿದವು. ನಗಾರಿ ಕಹಳೆಗಳ ಸಪ್ಪಳವು ಕಿವಿಯನ್ನು ಗಡಚಿಕ್ಕಿಸಹತ್ತಿತು. ಆಗ ಕನಕನಿಗಾದ ಸಂತೋಷವನ್ನು ಅಷ್ಟಿಷ್ಟೆಂದು ಹೇಳತೀರದು. ದೇವರು ಈ ಪರಿ ತನ್ನ ಮೇಲೆ ತೋರಿಸಿದ ಕರುಣೆಯಿಂದ ಆತನು ಮೈಮರೆದುಹೋದನು. ಶ್ರೀ ವೇಂಕಟಪತಿಯನ್ನು ಕಣ್ಣುತುಂಬಾ ನೋಡಿ ಮನದಣಿ ಕೊಂಡಾಡಹತ್ತಿದನು. ಕುಣಿಯಹತ್ತಿದನು. ಲೋಕದಲ್ಲಿ ಭಗವದ್ಭಕ್ತರ ಮಹಿಮೆಯು ಇನ್ನೆಷ್ಟು ಅಗಾಧವಾಗಿರುವದೋ ತಿಳಿಯದು. ಶ್ರೀ ಜಗನ್ನಾಥದಾಸರು ಹೇಳಿದಂತೆ:—

ಮಲಗಿ ಪರಮಾದರದಿ ಪಾಡಲು | ಕುಳಿತು ಕೇಳುವ ಕುಳಿತು ಪಾಡಲು |
ನಿಲುವ ನಿಂತರೆ ನಲಿವ ನಲಿದರೆ ಒಲಿವ ನಿಮಗೆಂಬ ||
ಸುಲಭನೋ ಹರಿ ತನ್ನವಸರ | ಗಳಿಗೆ ಬಿಟ್ಟಗಲನು ರಮಾಧವ |
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ . || ೧ ||

ಭಕ್ತನ ಭಕುತಿಗೆ ಮೆಚ್ಚಿ ಶ್ರೀ ವೇಂಕಟರಮಣನೂ ಕುಣಿಯುತ್ತಿದನು. ಈ ರೀತಿ ಗುಡಿಯೊಳಗಿನ ಗದ್ದಲಕ್ಕೆ ಜನ ಸಮೂಹವು ಕೂಡಿತು. ನೋಡುತ್ತಾರೆ! ಗುಡಿಯಲ್ಲಾದರೋ ಕನಕನೊಬ್ಬನ ಹೊರತು ಯಾರೂ ಇಲ್ಲ. ಇದೇನದ್ಭುತವಿರ ಬಹುದೆಂದು ಅವರು ಬೆದರಿದರು. ಯಾರಿಗೂ ಅದರ ಮರ್ಮವೇ ತಿಳಿಯಲೊಲ್ಲದು. ಅಷ್ಟರಲ್ಲಿ ಪಾರುಪತ್ಯಗಾರನು ಈ ಸಪ್ಪಳವನ್ನು ಕೇಳಿ ಓಡುತ್ತ ಬಂದನು. ಮುಂದೆ ಒಮ್ಮಿಂದೊಮ್ಮೆ ಸಪ್ಪಳವು ನಿಂತುಹೋಯಿತು ಸುತ್ತಲೂ ನೋಡುತ್ತಾನೆ ಕೀಲಿಯ ಕೈಗಳಾದರೂ ತನ್ನ ಹತ್ತಿರವೇ ಅವೆ; ಬಾಗಿಲುಗಳು ಹೇಗೆ ತೆರೆದವು? ಒಳಗೆ ಹೋಗಿ ನಿಂತವರಾರು? ದಿಟ್ಟಿಸಿ ನೋಡಿದನು. ಆಗ ಚಿನ್ನಪ್ಪನ ಕಣ್ಣುಗಳು ತೆರೆ ದವು; ಇದೆಲ್ಲ ಕನಕನ ಅದ್ಭುತ ವ್ಯಾಪಾರವೆಂದು ಅವನಿಗೆ ಮನವರಿಕೆಯಾಯಿತು. ಕೂಡಲೆ ಅತ್ಯಂತ ದೀನತೆಯಿಂದ ಕನಕನಿಗೆ ಸಾಷ್ಟಾಂಗ ಹಾಕಿದನು. ಸ್ವಾಮೀ ಪಾಮರನಾದ ನಾನು ತಮ್ಮ ಅಗಾಧ ಮಹಿಮೆಯನ್ನು ಹೇಗೆ ತಿಳಿದೇನು? ತಪ್ಪಾ ಯಿತು ಕ್ಷಮಿಸಬೇಕು ನನ್ನನ್ನುದ್ಧರಿಸಬೇಕು ಎಂದು ಬೇಡಿಕೊಂಡನು. ಮತ್ತು ಸೇರಿದ ಜನರಿಗೆಲ್ಲ ತನಗೆ ಬಿದ್ದ ಸ್ವಪ್ನದ ವಿಷಯವನ್ನೂ ಕನಕನ ಮಹಿಮೆಯನ್ನೂ ಸಾರಿ ಹೇಳಿ ಆತನನ್ನು ತನ್ನ ಮನೆಗೆ ಕರೆದೊಯ್ದನು ಅಲ್ಲಿಂದ ಒಂದು ದಿನ ಚಿನ್ನ ಪ್ಪನು ಕನಕನನ್ನು ಕರಕೊಂಡು—ಪಾಪವಿನಾಶಿನಿ-ಆಕಾಶಗಂಗೆ-ಪಾಂಡುತೀರ್ಥ ಮೊದಲಾದವುಗಳಿಗೆ ಹೋಗಿ ಬರುತ್ತಿರಲು ಶ್ರೀವೇಂಕಟರಮಣನು—ದಾರಿಯಲ್ಲಿ ಒಂದು ಸಣ್ಣ ಅಂಗಡಿಯನ್ನು ಹಾಕಿಕೊಂಡು ತಿರುನಾಮವನ್ನು ಧರಿಸಿ ಮಾರುವವ ನಂತೆ ಕುಳಿತಿದ್ದನು. ಇವರು ಬಂದ ಕೂಡಲೆ ಅಂಗಡಿಯಿಂದ ಹೊರಗೆ ಬಂದು— ಏನಯ್ಯಾ ಎಲ್ಲಾ ತೀರ್ಥ-ಕ್ಷೇತ್ರಗಳನ್ನು ಸಂಚರಿಸಿಕೊಂಡು ಇಲ್ಲಿಗೆ ಬಂದೆಯಾ? ಎಂದು ಕನಕನ ಕೈಹಿಡಿದು ಪ್ರಶ್ನೆ ಮಾಡಿದನು, ಕನಕಪ್ಪನಿಗೆ ತಿಳಿದು ಹೋಯಿತು. ಈತನು ಕಪಟನಾಟಕಿಯಾದ ಶ್ರೀವೇಂಕಟಪತಿಯೇ ಹೌದು. ಈ ರೀತಿ ನನಗೆ ದರ್ಶನ ಕೊಟ್ಟನೆಂದು ಆನಂದತುಂದಿಲನಾಗಿ ಅಲ್ಲಿಯೇ ಒಂದು * ಪದವನ್ನು ಹೇಳಿ

* ರಾಗ ಪೂರ್ವಿ—ಅಷ್ಟತಾಳ

ಬಂದೆವಯ್ಯಾ ಗೋವಿಂದಶೆಟ್ಟಿ | ನಿನ್ನ ಹರಿವಾಣ ತೀರ್ಥಪ್ರಸಾದ ಉಂಟೆ

ದನು. ಚಿನ್ನಪ್ಪನಿಗೆ ಅತೀವ ಆಶ್ಚರ್ಯವಾಯಿತು. ಪೂಜ್ಯಬುದ್ಧಿಯು ಇನ್ನೂ ಹೆಚ್ಚಿತು. ಕನಕಪ್ಪನನ್ನು ಎಂಟು ದಿವಸ ತನ್ನ ಮನೆಯಲ್ಲಿಟ್ಟುಕೊಂಡು ಆದರಾತಿಥ್ಯ ಮಾಡಿದನು. ಭಗವದ್ಭಕ್ತರಿಗೆ ಸರಿಯಾದವರು ಇನ್ನಾರ.? ಆದುದರಿಂದಲೇ ಒಬ್ಬ ದಾಸರು ಹೀಗೆ ಹೇಳಿಕೊಂಡಿದ್ದಾರೆ.

"ಸರಿಯು ಮಿಗಿಲುಂಟೆ ಲೊ ಕದಲಿ | ಹರಿಭಕ್ತಿಯೆಂಬ ಮಾತಿಯು ಮುಕ್ಕಿಲ್ಲಗೇ" ||

(ವೈಕುಂಠದಾಸ)

———

## ೧೮ನೆಯ ಕಥೆ.

## ದೇವರ ತಲೆಯಲ್ಲಿ ಜಡೆಯುಂಟಾದದ್ದು.



**ಮುಂದೆ** ಕನಕಪ್ಪನು ಶ್ರೀವೆಂಕಟಪತಿಯಿಂದ ಅಪ್ಪಣೆ ತಕೊಂಡು ಸಂಚಾರ ಮಾಡುತ್ತ ಕಾಗಿನೆಲ್ಲಿಗೆ ಬಂದನು. ಅದೇ ಅವನ ಇಷ್ಟದೇವತೆಯ ಸ್ಥಳವಲ್ಲವೇ? ಎಂದ ಒಳಿಕ ಕೇಳ ವದೇನ.? ಸಂತೋಷದಿಂದ ಶ್ರೀಆದಿಕೇಶವನ ಗುಡಿಯಲ್ಲಿ ಪೂಜಾರಿಯಾಗಿ ನಿಂತ ಕೊಂಡನು. ಅಲ್ಲಿಯ ಜನರೆಲ್ಲರೂ ಬೀರಪ್ಪನ ಮಗನು ಬಂದನೆಂದು ಆನಂದಪಟ್ಟರು ಇನ್ನು ಇಲ್ಲಿ ನಡೆದ ಒಂದೆರಡು ಚಮತ್ಕಾರಗಳನ್ನು ಕೇಳಿರಿ.

---

ನಲಿರಾಗಿ || ಪ || ಅಪ್ಪವು ಅತಿರಸ ತುಪ್ಪವು ಬಿಸಿಹಾಲು | ಒಪ್ಪುವ ಸಕ್ಕರೆಯಾಲಕ್ಕಿಯು || ಅಪ್ಪರೂ ವಾವ ಕಜ್ಜಾಯಗಳನೆಲ್ಲ | ಛಪ್ಪನ್ನದೇಶಕ್ಕೆ ಮಾರುವ ಶೆಟ್ಟಿ || ೧ || ಒಡದ ಮಡಿಕೆ ತಂದು ಇಡದ ನಾವವ ಮಾಡಿ | ಕೊಡುವೆ ನೀ ಕಾಸಿಗೆ ಒಂದೊಂದನು || ಒಡಲು ತುಂಬಿಸಿ ಮಿಕ್ಕ ಅನ್ನವ ಮಾರಿಸಿ | ಒಡವೆಯ ಘಳಿಸುವ ಕಡುಲೋಭಿ ಶೆಟ್ಟಿ || ೨ || ಶೇಷಗಿರಿಯಲ್ಲಿ ವಾಸವಾಗಿಹ ಶೆಟ್ಟಿ | ದೇಶದೇಶಕ್ಕೆ ಹೆಸರಾದ ಶೆಟ್ಟಿ || ಕಾಸು ಕಾಸಿಗೆ ಬಡ್ಡಿ ಘಳಿಸಿಕೊಂಬ ಆದಿ | ಕೇಶವ ನಾರಾಯಣ ತಿಮ್ಮಶೆಟ್ಟಿ || ೩ ||

ಕನಕನು ಶ್ರೀ ಕೇಶವ ದೇವರ ಪೂಜಾರಿಯಾಗಿ ನಿಂತ ಕೊಂಡು ಊರಲ್ಲಿ ಒಬ್ಬ ವೇಶ್ಯಾಸ್ತ್ರೀಯಳನ್ನಿಟ್ಟುಕೊಂಡಿದ್ದನು. ವೇಶ್ಯಾ ಶಬ್ದಮಾತ್ರದಿಂದಲೇ ಈತನನ್ನು ವಿಟಪುರುಷನೆಂದು ತಿಳಿಯತಕ್ಕದ್ದಲ್ಲ ಹಾಗಿದ್ದಮಾತ್ರಕ್ಕೆ ಸಾಕ್ಷಾತ್ ನಾರದಾಂಶರಾದ ಪುರಂದರದಾಸರೇ ಮೊದಲಾದವರು ಇಷ್ಟುಮಟ್ಟಿಗೆ ಹೊಗಳು ತ್ತಿರಲಿಲ್ಲ. ಅಲ್ಲದೆ ಈತನ ಕೀರ್ತಿಯೂ ಹಬ್ಬುತ್ತಿರಲಿಲ್ಲ ಯಾವಳೋ ಒಬ್ಬಳು ಈತನಿಂದ ಕೃತಾರ್ಥಳಾಗಬೇಕಾಗಿರಬಹುದು. ಅಂತೆಯೇ ದೇವರು ಹೀಗೆ ಯೋ- ಜನೆ ಮಾಡಿದ್ದನು. ಆಕೆ ಈಗಿನಂಥ ವೇಶ್ಯೆ (ವಾರಾಂಗನೆ) ಯೂ ಅಲ್ಲ ಈತನು ಈಗಿನಂಥ ವಿಟನೂ ಅಲ್ಲ. ಅದು ಹೇಗೇ ಇರಲಿ ದೇವರಿಗೆಂದು ಭಕ್ತರು ತಂದು ಕೊಟ್ಟ ಜಲೋ ಹೂವಿನ ಮಾಲೆ, ಕೇದಗೆಗಳೆಲ್ಲ ಈಕೆಯು ಒಂದು ಎಬಿನಕ್ಷಿಯೆ ೀ ಒರಗಿಕೊಳ್ಳುತ್ತಿದ್ದವು ಅಂಥಿಂಥ ಮಾಲೆಗಳು, ಬಿಡಿ ಹೂವುಗಳು, ಬತ್ತಿಬಾಡಿದ ಕೇದಗೆಗಳು ಮಾತ್ರ ದೇವರ ಪಾಲಿಗಿರುತ್ತಿದ್ದವು. ಈ ಸಂಗತಿಯು ಊರೊಳಗಿನ ಬ್ರಾಹ್ಮಣರಿಗೆ ತಿಳಿದಿತ್ತು. ಒಂದಾನೊಂದು ದಿವಸ ಆ ಪ್ರಾಂತದ ಅಧಿಕಾರಿಗಳು ಅಲ್ಲಿಗೆ ಬಂದರು. ಸಾಂಪ್ರದಾಯದಂತೆ ಹಣ್ಣು-ಕಾಯಿಗಳನ್ನು ದೇವರಿಗೆ ಅರ್ಪಿ ಸಿದ್ದಾಯಿತು; ಕಡೆಗೆ ಅಧಿಕಾರಿಗಳು:—ನಾಳಿನ ದಿವಸ ನಮಗೊಂದು ದೇವರ ನಿರ್ಮಾಲ್ಯದ ಮಾಲೆಯನ್ನು ಕೊಡಬೇಕೆಂದು ಹೇಳಿದರು. 'ಕಾಮಾಂಧೋ ನೈವ ಪಶ್ಯತಿ' ಎಂಬ ಮಾತು ಸುಳ್ಳಲ್ಲ. ಮೊದಲು ಹಾಗೇ ಆಗಲೆಂದು ಹೇಳಿದ್ದ ಕನ ಕನು ಮರುದಿವಸ ತನ್ನ ಪ್ರಿಯಳು ತುರುಬಿನಲ್ಲಿ ಮುಡಿದದ್ದೊಂದು ಮಾಲೆಯನ್ನು ತಂದು ನಿರ್ಮಾಲ್ಯವೆಂದು ಅವರಿಗೆ ಕೊಟ್ಟುಬಿಡಬಹುದೇ? ಅಧಿಕಾರಿಗಳಿಗೆ ಏನು ತಿಳಿಯುವದು? ಕೊಟ್ಟದ್ದನ್ನು ಸುಮ್ಮನೆ ತಕ್ಕೊಂಡು ಹೋಗುವರು ಎಂಬದೇ ಆತನ ತಿಳುವಳಿಕೆ. ಅಧಿಕಾರಿಗಳಾದರೂ ಅದರಂತೆಯೇ ಆ ಮಾಲೆಯನ್ನು ಅತ್ಯಂತ ಭಕ್ತಿಯಿಂದ ತಕ್ಕೊಂಡು ಹೋಗಿ ಮನೆಯಲ್ಲಿ ಕೊಟ್ಟರು ಪಾಪ! ಅವರಿಗೆ ಇದೆಲ್ಲ ಏನು ಗೊತ್ತು? ಆದರೆ ಮಾಲೆಯನ್ನು ಮಡಿಯಬೇಕೆನ್ನುವಷ್ಟರಲ್ಲಿ ಅದರಲ್ಲಿ ಮೊಳ ಉದ್ದವಾದ ಒಂದು ಕೂದಲು ಕಾಣಿಸಿತು. ಸಂಗಡಲೇ ಹಿಂವಕ್ಕೆ ಕಳಿಸಿಬಿಟ್ಟರು. ಕೂದಲು ಬಂದಿತೇಕೆಂಬದೇ ಅವರ ಯೋಚನೆ. ಆಗ ಅಧಿಕಾರಿಗಳು ಹತ್ತರಿದ್ದ ಬ್ರಾಹ್ಮಣರನ್ನು ವಿಚಾರಿಸಿದರು. ಎಳೆ ಸಿಕ್ಕರೆ ಹಚ್ಚಡ ನುಂಗಬಹುದೆಂಬ ಗಾದೆ ಯಂತೆ ಮೊದಲೇ ಕನಕನಮೇಲೆ ಬೆಂಕಿಯನ್ನು ಕಾರುತ್ತಿದ್ದ ಬ್ರಾಹ್ಮಣರು ಈಗ ಸುಮ್ಮನಿರುವರೇ? ಆವನ ಗರ್ವಮುರಿಯುವದಕ್ಕೆ ಇದು ಒಳ್ಳೇ ಸಮಯವೆಂದು— ಹೇ ಪ್ರಭೋ, ಏನು ಹೇಳೋಣ? ಕನಕನು ಮಹಾ ವ್ಯಭಿಚಾರಿಯಾಗಿ

ರುವನು ಈ ಹೊತ್ತು ತನ್ನ ಹೆಂಗಸಿನ ತಲೆಯೊಳಗಿನ ಹೂ ಮಾಲೆಯನ್ನೇ ತಮಗೆ ತಂದುಕೊಟ್ಟಿರುವನು ಇದು ಎಷ್ಟು ಮಾತ್ರಕ್ಕೂ ದೇವರಿಗೆ ಮುಡಿಸಿದ್ದಲ್ಲ. ಹಾಗಿದ್ದರೆ, ಕೂದಲು ಬರುವದುಂಟೇ? ಇಂತಹ ಕ್ರೂರಕರ್ಮಿಯಾದವನಿಗೆ ತಕ್ಕ ಶಾಸನವಾಗಬೇಕು. ಎಂಬದಾಗಿ ಅಧಿಕಾರಿಗಳ ಕಿವಿಯೂದಿದರು. ಹೀಗೆಂಬ ಬ್ರಾಹ್ಮಣರ ನುಡಿಯನ್ನು ಕೇಳಿ ಅಧಿಕಾರಿಗಳೂ ಕುಪಿತರಾದರು. ಒಡನೆಯೇ ಎಲ್ಲರನ್ನು ಕರಕೊಂಡು ಗುಡಿಗೆ ಹೊರಟರು. ಇತ್ತ ಊರಲ್ಲೆಲ್ಲಾ ಕನಕನಿಗೆ ಕಾರಾಗೃಹವಾಗುವದೆಂಬ ಸುದ್ದಿ ಎಲ್ಲಿ ಹೋದರೂ ಇದೇ ಮಾತು. ಗುಡಿಯಲ್ಲಿ ಇದ್ದ ಕನಕನಿಗೆ ಮಾತ್ರ ಯಾವದೂ ಗೊತ್ತಿಲ್ಲ. ಜನ ಸಮೂಹವು ಕೂಡಿತು. 'ಮಾಡಿದ ಕರ್ಮಕ್ಕೆ ಮನವೇ ಸಾಕ್ಷಿ' ಎಂದು ಕೆಲವರೂ, ಮಾಡಿದವನು ಉಣ್ಣುವನು ಮಣಿಯುಂಥ ಕಡಬು' ಎಂದು ಕೆಲವರೂ, ನಮಗಿದರ ಗೊಡವೆಯೇಕೆಂದು ಇನ್ನೂ ಕೆಲವರೂ ಗುಜು ಗುಜು ಮಾತಾಡಹತ್ತಿದರು. ಅಷ್ಟರಲ್ಲಿ ಅಧಿಕಾರಿಗಳು ಗುಡಿಯೊಳಗೆ ಬಂದು:—ಕನಕಾ, ಈ ಹೂವಿನ ಮಾಲೆಯನ್ನು ಎಲ್ಲಿಂದ ತಂದು ಕೊಟ್ಟಿ? ನಿಜವಾಗಿ ಹೇಳು. ಇಲ್ಲದಿದ್ದರೆ ಈಗಲೇ ನಿನಗೆ ತಕ್ಕ ಶಾಸನವಾದೀತು. ಎಂದು ಗರ್ಜಿಸಿದರು ಕನಕನು ಆ ನುಡಿಯನ್ನು ಕೇಳಿ ಅತಿ ವಿನಯದಿಂದ:—ಸ್ವಾಮಿ, ಸನ್ನಿಧಿಗೆ ಅರ್ಪಿಸಬೇಕಾದರೆ. ಎರಡನೇದನ್ನು ಎಲ್ಲಿಂದ ತರಲಿ? ನಿನ್ನೆಯ ದಿನ ಅಪ್ಪಣೆ ಕೊಡಿಸಿದಂತೆ ದೇವರು ಶಿರಸ್ಸಿನಲ್ಲಿ ಧರಿಸಿದ್ದನ್ನೇ ಕೊಟ್ಟಿರುವೆನು. ಎಂದು ಧೈರ್ಯದಿಂದ ಹೇಳಿದನು. ಅಧಿಕಾರಿಗಳಿಗೆ ಕೋಪವು ಮತ್ತಿಷ್ಟು ಹೆಚ್ಚಾಯಿತು. ಕೋಪದಿಂದವರು:—ಛೀ ಮೂರ್ಖಾ! ಇದೇನು ಸ್ವಾಮಿಯು ಧರಿಸಿದ್ದೋ, ಸ್ವಾಮಿನಿಯು ಧರಿಸಿದ್ದೋ? ದೇವರ ಪಾದಾರವಿಂದದಲ್ಲಿ ನಿಂತು ಏನು ಹೇಳುತ್ತೀ? ನಾಚಿಕೆಯಿಲ್ಲವೇ ನಿನಗೆ? ಇದು ನೋಡು ಎಲ್ಲಿಂದ ಬಂದಿತು? ಇನ್ನಾದರೂ ನಿಜವನ್ನು ಹೇಳು ಎಂದು ಅದರಲ್ಲಿರುವ ಕೂದಲವನ್ನು ತೋರಿಸಿದರು. ಕೂಡಿದವರೆಲ್ಲರೂ ಹೌಹಾರಿ ನಿಂತರು ಕನಕನಿಗಾಗ ಪ್ರಜ್ಞೆ ಹುಟ್ಟಿತು ಓಹೋ ಮೋಸವಾಯಿತು ಇನ್ನೇನು ಗತಿಯೆಂದು ಯೋಚಿಸಿ ಮನಸ್ಸಿನಲ್ಲಿಯೇ ದೇವರಿಗೆ ಶರಣಾಗತನಾಗಿ—ಜೀಯಾ! ಸ್ವಾಮಿಯ ಶಿರಸ್ಸಿನಲ್ಲಿ ಜಡೆಯಿರುವದರಿಂದ ಒಂದು ಕೂದಲು ಬಂದಿರಬಹುದು. ಇದರಲ್ಲಿ ವಿಕಲ್ಪಕ್ಕೆ ಕಾರಣವಿಲ್ಲೆಂದು ಹೇಳಿದನು. ನೆರೆದ ಹುಡುಗರಿಗೆ ಹುಡುಗಾಟವೆನಿಸಿತು ಸತ್ಪುರುಷರಿಗೆ ಸತ್ಯವೆನಿಸಿತು ಅಧಿಕಾರಿಗಳು—ದೇವರಿಗೆ ಜಡೆಯಿರುವದುಂಟೆ? ಎಂದು ಪ್ರಶ್ನೆ ಮಾಡಲು ಬೇಕಾದರೆ ಹತ್ತಿರ ಬಂದು ನೋಡಬಹುದೆಂದು ಕನಕನು ಕೈಮುಗಿದು ಬಿನ್ನವಿಸಿದನು.

ಅಹಹಾ! ದೇವರು ಭಕ್ತಪರಾಧೀನರಲ್ಲವೆ? ಯಾವನು ತನ್ನನ್ನೇ ನಂಬಿ ಪ್ರಾಣವನ್ನೂ ಕೊಡಲು ತೊರೆಯಲಿಕ್ಕೆ ಸಿದ್ಧನಾಗಿರುವನೋ, ಯಾವನು ಅಚಲವಾದ ಭಕ್ತಿಯುಳ್ಳವನೋ ಅಂಥಾ ಪ್ರಿಯ-ಭಕ್ತನನ್ನು ಉದ್ಧರಿಸುವ ವೇಳೆಯು ಇದೇ ಎಂದು ಶ್ರೀಕೇಶವಮೂರ್ತಿಯು—ಹಿಂದಕ್ಕೆ ಪ್ರಹ್ಲಾದನ ನುಡಿಗೆ ನೃಸಿಂಹಾವತಾರವನ್ನು ತಾಳಿದಂತೆ ಶಿರಸ್ಸಿನಲ್ಲಿ ಜಡೆಯನ್ನು ಸಿದ್ಧಪಡಿಸಿಕೊಂಡು ನಿಂತನು. ಅಧಿಕಾರಿಗಳು ಆಶ್ಚರ್ಯದಿಂದ ದೇವರ ಸನ್ನಿಧಿಗೆ ಬಂದು ನೋಡಲು ಮಹತ್ತಾದ ಜಡೆಯುಂಟಾಗಿತ್ತು ಅವರಿಗೆ ಇದೊಂದ ವಿಚಿತ್ರವೆನಿಸಿತು ಆದರೆ ಚಾಡಿಕೋರರು ಇದನ್ನು ನಂಬದೆ—ಕೃತ್ರಿಮ ಜಡೆಯನ್ನುಂಟು ಮಾಡಿರಬಹುದಲ್ಲದೆ ದೇವರಿಗೆ ಜಡೆಯಿರುವದುಂಟೆ? ಎಂದು ಅಧಿಕಾರಿಗಳನ್ನು ಪ್ರೋತ್ಸಾಹಿಸಿದರು. ಅವರ ಮಾತಿಗೆ ಕಿವಿಗೊಟ್ಟ ಅಧಿಕಾರಿಗಳಾದರೂ ಹಾಗೆಯೇ ನಂಬಿ—ನೀನು ಮೋಸಗಾರನಿರುತ್ತೀ. ಜಡೆಯುಂಟಾದದ್ದು ಸುಳ್ಳು; ಇದು ನಿನ್ನ ಕೃತ್ರಿಮವೇ ಸರಿ ಎಂದರು. ಆಗ ಕನಕನು ಕೈಮುಗಿದು—ಪ್ರಭೋ! ನಾನೇತಕ್ಕೆ ಇಂಥ ಸಾ-ಹಸ ಕಾರ್ಯ ಮಾಡಲಿ? ಬೇಕಾದರೆ ಪರೀಕ್ಷಿಸಿ ನೋಡಬಹುದು. ಎನ್ನಲು—ಹಾಗಾದರೆ ಒಂದೆರಡು ಕೂದಲುಗಳನ್ನು ಕಿತ್ತು ಕೊಡೆಂದು ನುಡಿದರು. ಜನವೆಲ್ಲ ಸ್ತಬ್ಧವಾಯಿತು ಎಲ್ಲರ ದೃಷ್ಟಿಯು ದೇವರ ಮೇಲೆ ಕೂತಿತು ಏನಾಗುತ್ತದೋ ನೋಡಬೇಕೆಂಬುದೇ ಜನರಲ್ಲಿ ಕುತೂಹಲ. ಇನ್ನೊಂದಿಲ್ಲ. ಕನಕನು ದೇವರಿಗೆ ಸಾಷ್ಟಾಂಗವೆರಗಿ—ಸ್ವಾಮಿ ಭಕ್ತವತ್ಸಲಾ! ಸೇವಕನನ್ನು ಕಾಪಾಡುವ ಭಾರವು ನಿನ್ನನ್ನೇ ಕೂಡಿದೆ. ಎಂಬದಾಗಿ ಬೇಡಿಕೊಂಡು ಶಿರಸ್ಸಿನಲ್ಲುಂಟಾದ ಜಡೆಯಿಂದ ಮೂರು-ನಾಲ್ಕು ಕೇಶಗಳನ್ನು ಕಿತ್ತಿದನು. ಕೂಡಲೆ ಕೇಶವಮೂರ್ತಿಯ ಎರಡೂ ಕಣ್ಣುಗಳೊಳಗಿಂದ ದಳದಳನೆ ನೀರು ಸುರಿದವು ಆಗ ಕೇಳುವದೇನು? ನೆರೆದವರೆಲ್ಲರೂ ಗಡಗಡನೆ ನಡುಗಿ ಭಯಭ್ರಾಂತರಾಗಿ ನಿಂತರು. ಅಧಿಕಾರಿಗಳಂತೂ ಸಾಷ್ಟಾಂಗಪ್ರಣತರಾದರು ಚಾಡಿಕೋರರೆಲ್ಲರೂ ತಪ್ಪಾಯಿತೆಂತು ಕ್ಷಮೆ ಬೇಡಿಕೊಂಡರು. ಯಾರ ಬಾಯಲ್ಲಿಯೂ ಕನಕನ ಮಹಿಮೆಯೇ. ಒಬ್ಬರ ಮಾತು ಒಬ್ಬರಿಗೆ ಕೇಳಿಸದಂತಾಯಿತು; ಈ ಪ್ರಕಾರ ಪೂಜಾರಿಯ ಮಹಿಮೆಯನ್ನು ಕಂಡು ಅಧಿಕಾರಿಗಳು ಭಯ-ಭಕ್ತಿಯಿಂದ ಆತನಿಗೆ ಒಂದು ಹಳ್ಳಿಯನ್ನೇ ಇನಾಮಾಗಿ ಹಾಕಿಕೊಟ್ಟರು. ಕನಕನು ಅದನ್ನು ತಕ್ಕೊಂಡು ಮಾಡುವದೇನು? ಆತನಿಗೆ ಕಾಂಚನವೂ ಅಷ್ಟೇ? ಕಬ್ಬಿಣವೂ ಅಷ್ಟೆ? ಎಲ್ಲವನ್ನೂ ಸಮನಾಗಿ ತಿಳಿದ ಮಹಾತ್ಮನು ಆಶೆಪಡುವನೇತಕ್ಕೆ? ದೇವರಿಗೆ ಸಮರ್ಪಣ ಮಾಡಿಬಿಟ್ಟನು.

ಅದ್ಯಾಪಿ ಅದು 'ದಾಸನಕೊಪ್ಪ' ಎಂಬ ಹೆಸರಿನಿಂದ ಇಲ್ಲಿಯ ದೇವರಿಗೆ ನಡೆಯು ತ್ತಿರುವದು.

ಭಕ್ತಿಯೆಂಬ ಪಾಶದಿಂದ ಭಗವಂತನನ್ನು ಕಟ್ಟಿಹಾಕಿದ ಮಹಾತ್ಮರಿಗೆ ಯಾವದು ತಾನೇ ಅಸಾಧ್ಯವಾದೀತು? ಅಂತೆಯೇ ಶ್ರೀ ಶ್ರೀಪಾದರಾಯಸ್ವಾಮಿ ಗಳವರು ದೇವರನ್ನು ಹೀಗೆ ಬೇಡಿಕೊಂಡಿದ್ದಾರೆ.—

ನಾನಿನಗೇನು ಬೇಡುವದಿಲ್ಲ | ಎನ್ನ ಹೃದಯಕಮಲದೊಳು ನಿಂದಿರೊ ಹರಿಯೆ || ಪಲ್ಲ || ಬುದ್ಧಿನಿನ್ನೊಳು ಕುಣಿದಾಡಲಿ | ಎನ್ನಚಿತ್ತ ನಿನ್ನಲಿ ನಲಿದಾ ಡಲಿ || ಭಕ್ತಜನರ ಸಂಘದೊರಕಲಿ | ರಂಗವಿರಲನಿನ್ನ ದಯವಿರಲಿ ಹರಿಯೆ ||

---

## ೧೯ನೆಯ ಕಥೆ.



## ಮೋಹನತರಂಗಿಣಿಯನ್ನು ಬರೆದದ್ದು.

**ಕನಕದಾಸನು** ಕಾಗಿನೆಲ್ಲಿಯಲ್ಲಿದ್ದುಕೊಂಡು ಪ್ರತಿವರುಷವೂ ತಿರುಪತಿಯ ಯಾತ್ರೆಗೆ ಹೋಗುವದೊಂದು ನಿಯಮವನ್ನು ಮಾಡಿಕೊಂಡಿದ್ದನು. ಅಲ್ಲಿಗೆ ಹೋಗ ಬೇಕಾದರೆ ಕದರಮಂಡಲಗಿ * ಎಂಬ ಗ್ರಾಮದ ಹತ್ತಿರವೇ ಹಾಯ್ದುಹೋಗು ತ್ತಿದ್ದನು. ಆದರೂ ಒಮ್ಮೆ ಸಹ ಶ್ರೀಪ್ರಾಣದೇವರ ದರ್ಶನವನ್ನು ತಕ್ಕೊಂಡಿರ ಲ್ಲಿಲ್ಲ. ಹೀಗೆಯೇ ಕೆಲವು ದಿನಗಳು ಕಳೆದವು. ಕನಕನಿಗೊಂದು ಬೇನೆಯು ಹುಟ್ಟಿತು. ಭಗವಂತನಿಗೆ ಎಷ್ಟೋ ಬೇಡಿಕೊಂಡನು; ಮೊರೆಯಿಟ್ಟನು ಆದ ರೇನು? ಬೇನೆಯು ಹೆಚ್ಚುತ್ತಲೇ ಹೋಯಿತು. ಆಗ ತಾನೇ ಕನಕನು ಕಂಗೆಟ್ಟು ಗಾಬರಿಯಾದನು. ಏಕೆ ಹೀಗಾಗಿರಬಹುದೆಂದು ಯೋಚಿಸುತ್ತ ಮತ್ತೆ ಮೊದಲಿ

---

* ಇದು ರಾಣೇಬೆನ್ನೂರ ತಾಲೂಕಿನಲ್ಲಿ, ರಾಣೇಬೆನ್ನೂರಿಂದ ೮ ಮೈಲಿ ನಲ್ಲಿ ಅದೆ. ಇಲ್ಲಿ ಜನಮೇಜಯನಿಂದ ಸ್ಥಾಪಿತವಾದ ಒಂದು ಪ್ರಸಿದ್ಧ ಹನುಮಂ ತದೇವರ ಗುಡಿಯುಂಟು. ಇಲ್ಲಿಯೇ ರಾಮದಾಸ, ಶ್ರೀನಿವಾಸದಾಸ, ಹಿರೇ ಆಚಾರ್ಯರು ಮೊದಲಾದವರು ಪ್ರಸಿದ್ಧರಾದರು. ಇವರ ಚರಿತ್ರಗಳನ್ನೆಲ್ಲ ಪ್ರತ್ಯೇಕವಾಗಿ ಬರೆದಿರುವೆವು.

ನಂತೆ ತಿರುಪತಿಯ ಯಾತ್ರೆಗೆ ಹೊರಟನು. ಹಾಗೂ ಹೀಗೂ ಅಲ್ಲಿಗೆ ಮುಟ್ಟಿ ಅತಿ ದೀನವಾಣಿಯಿಂದ ದೇವರನ್ನು ಸ್ತುತಿಸತೊಡಗಿದನು * ಹೇ ಶೇಷಾಚಲವಾಸಿಯಾದ ನಾರಾಯಣಾ! ವೇಂಕಟೇಶಾ! ದಯಾನಿಧೇ! ಯಾವ ನೀನು ಸಮಸ್ತ ಪ್ರಾಣಿಗಳನ್ನು ತಾಯಿ-ತಂದೆಗಳಿಗಿಂತ ಹೆಚ್ಚು ವಾತ್ಸಲ್ಯದಿಂದ ರಕ್ಷಿಸುವಿಯೋ, ನಿನ್ನ ಚರಣಾರವಿಂದವೇ ಗತಿಯೆಂದು ನಂಬಿದ ಭಕ್ತರನ್ನು ಈ ಸಂಸಾರವೆಂಬ ಕಾಡ್ಗಿಚ್ಚಿನಿಂದ ದೂರಮಾಡಿ ಮೋಕ್ಷವನ್ನು ಕೊಟ್ಟು ಸಲಹುವಿಯೋ ಅಂಥ ಲೋಕಪಾಲಕನಾದ ನೀನು ದಾಸಾನುದಾಸನಾದ ನನ್ನನ್ನು ಯಾತಕ್ಕಿಷ್ಟು ಕಾಡುವೆ? ತ್ರಿಗುಣಾತೀತನೂ ಆದಿಮೂರುತಿಯೂ ಆದ ನಿನ್ನನ್ನು ಸ್ತುತಿಸಲು ನಾನೆಷ್ಟರವನು? ದುಃಸಹವಾದೀ ಬೇನೆಯನ್ನು ತಾಳಲಾರೆನು. ಕಾಪಾಡು! ಕಾಪಾಡು! ಇಗೋ ನೋಡು, ಇಲ್ಲದೆ ಹೋದರೆ ತವಪಾದಾರವಿಂದದಲ್ಲಿಯೇ ನಿಶ್ಚಯವಾಗಿ ಅಸುದೊರೆಯುವೆನು ಆ ಮೇಲೆ ನಿನ್ನ ಚಿತ್ತಕ್ಕೆ ಬಂದಂತಾಗಲಿ.

---

* ರಾಗ—ಕೇದಾರಗೌಳ, ಛಾಪು.

ಸಿರಿಯುಮಡವೆ ಮುಕುಂದಾ | ನಿನ್ನ | ಚರಣ ಸೇವಕನ ನಿನ್ನಹಸರಾಕೆಲೊ ದೇವ || ಪಲ್ಲ ||

ಅಷ್ಟದಿಕ್ಪಾಲಕರ ಮಧ್ಯದಲಿ ವೈಕುಂಠ | ಪಟ್ಟಣದಿ ಸಿರಿವೋಲಗವು ನಿತ್ಯದಿ || ಕಟ್ಟಿ ಓಲೈಸುತಿಹ ದಾಸರ ನಿಮಿಷರ ವನ | ಮುಟ್ಟಿ ಪಾಡುವ ನಾರದರ ಗೀತ ಸಂಭ್ರಮದಿ || ೧ || ಸಕಲೈಶ್ವರ್ಯಕಧಿದೇವಿ ನಿಮ್ಮರಸಿಬಲು | ಯುಕುತಿಯೊಳು ಲೋಕವನು ಸಲಹುತಿಹಳೂ || ಸತತ ನಿನ್ನಯ ಹಿರಿಯಮಗ ಪ್ರಾಣಿಗಳ ಸೃಜಿಸುವನು | ಅತಿ ಮರಳುಮಾಳ್ಪಾತ ಕಿರಿಯಮಗನೆಂತೆಂಬ || ೨ || ಬಲ್ಲಿದರಿಗೆ ಬಲ್ಲಿದನೆಂಬುದು ಅರಿ | ದಲ್ಲಣನು ಎಂತೆಂಬೊ ಒಲ-ಸಾಹಸಾ || ಇಲ್ಲ ನಿನಗಿದಿರ್ಯಾರು ಎಂಬೊ ಗರ್ವದಿಯೆನ್ನ | ಸೊಲ್ಲು ನಿನ್ನಯ ಕಿವಿಗೆ ಕೇಳಿಸದೆ ಪೋದಿತೇ || ೩ || ಶೇಷಮಾಹನ ಸುಮಂಚ ಗರುಡವಾಹನಾ ಉರು | ವಾಸದಂಡಿಗೆಯ ಕೊರಳವೈಜಯಂತಿ || ಏಸಲಳಿಯದ ಪೂಮಾಲೆಗಳ ಧರಿಸಿಜಗ | ದೀಶನೆಂಬೊ ಬಿರುದ ಮೆರೆದು ಹೊಗಳಿಸಿಕೊಂಬ || ೪ || ಭಕ್ತವತ್ಸಲನೆಂಬೊ ಬಿರುದು ಬಿಡು ಅಲ್ಲದಡೆ | ಎನ್ನನು ಕಾಯೊ ಸುಲಭದಿಂದಾ || ಮುಕ್ತಿಯನು ಪ್ರಕಟಿಸಲು ಲೋಕದೊಳು ಭಜಕರಿಗೆ | ಕತುಳಕಾಗಿ ನೆಲೆಯಾದಿ ಕೇಶವನೇ || ೫ ||

ಅಹಾ! ಭಕ್ತವತ್ಸಲನಾದ ಪರಮಾತ್ಮನು ತನ್ನ ದಾಸನ ಈ ದೀನವಾಣಿಯನ್ನು ಕೇಳಿ ಹೇಗೆ ಸುಮ್ಮನೆ ಕುಳಿತುಕೊಂಡಾನು? ಕನಕನು ಕಪಟಭಕ್ತಿಯುಳ್ಳವನೇ? ಕುಳಿತರೆ ಅದು ದೊರೆಯುವದೇ ನಿಶ್ಚಯವಾಗಿತ್ತು. ಅದರಿಂದಲಾ ಜಗದೀಶನು ಕನಕನಿಗೆ ಕೇಳಿಸುವಂತೆ ಆಕಾಶವಾಣಿಯನ್ನುಂಟುಮಾಡಿದನು. ಆಕಾಶವಾಣಿಯೇನು? 'ಕದರಮಂಡಲಗಿಯ ಪ್ರಾಣದೇವರಿಗೆ ಶರಣಾಗತನಾಗದೆ ಬೇನೆಯು ತೊಲಗಲಾರದು.'

"ಹರೇರ್ವಿರುದ್ಧಂ ನಕರೋತಿ ವಾಯುಃ | ವಾಯೋರ್ವಿರುದ್ಧಂ ನಕರೋತಿ ವಿಷ್ಣುಃ" || ಎಂಬ ಪುರಾಣ ವಚನದಂತೆ ಶ್ರೀ ವೆಂಕಟಪತಿಯು ಪ್ರಾಣದೇವರ ಕಡೆಗೆ ಹಾಕಿಕೊಟ್ಟನು. ಕನಕನು ಕಿವಿಗೊಟ್ಟು ಕೇಳಿದನು. ಮೊದಲಿನ ಅವನ ಅಹಂಕಾರವೆಲ್ಲ ಹೋಯಿತು. ಜ್ಞಾನೋದಯವಾಯಿತು ಸೂರ್ಯನುದಯಿಸಲು ಕತ್ತಲೆಯು ಎತ್ತ ನಿಲ್ಲುವದು? ಸಂಗಡಲೇ ತಿರುಪತಿಯಿಂದ ಹೊರಟು ಕದರಮಂಡಲಗಿಗೆ ಬಂದನು. ಪ್ರಾಣದೇವರ ದರ್ಶನವಾಯಿತು. ಅವನಿಗಾದ ಆನಂದವನ್ನು ಹೇಳತೀರದು. ದೇವರನ್ನು ಎಷ್ಟೋ ಸ್ತುತಿಸಿದನು. * ಕುಣಿದನು. ಆದರೂ ಆತನಿಗೆ ಮನದಣಿಯಲಿಲ್ಲ ಅಲ್ಲಿಯೇ ಕೆಲವು ದಿವಸ ನಿಂತು ದೇವರ ಸೇವೆಯಲ್ಲಿ ನಿರತನಾದನು. ಆತನು ವಾಸಿಸಿದ ಸ್ಥಳವು ಗುಡಿಯ ಪೌಳಿಯೊಳಗೆ 'ಕನಕಪ್ಪನ ಗುಡಿ' ಎಂಬ ಹೆಸರಿನಿಂದ ಈಗಲೂ ಪ್ರಸಿದ್ಧವಿದೆ. ಇಲ್ಲಿಯೇ ನಿಂತು ಕನಕದಾಸನು ಶ್ರೀಕೃಷ್ಣಚರಿತಾಮೃತವಾದ 'ಮೋಹನ ತರಂಗಿಣೀ' ಎಂಬ ಕಾವ್ಯವನ್ನು ಬರೆದನು. ಬೇನೆಯು ತೊಲಗಿತು; ಕನಕನು ಮೊದಲಿನಂತಾದನು. ಈ ಪುರಾಣವು ಪ್ರತಿವರ್ಷ ಕಾರ್ತಿಕಮಾಸದಲ್ಲಿ ಒಂದು ತಿಂಗಳವರೆಗೆ ಇಲ್ಲಿಯ ಗುಡಿ

* ರಾಗ ಕಾಂಬೋಧಿ. ಝಂಪೆ ತಾಳ.

ಕದರ ಉಂಡಲಗಿಯಾ ಕರುಣಿ ಹನುಮರಾಯಾ | ಸದ್ಗುಣವಂತನೆ ಗುಣವಂತನೆ || ಪಲ್ಲ || ಅಂಜನೀಯ ವರಸೂನು ಆಶ್ರಿತ ಕಾಮಧೇನು | ಮಂಜುಳ ಸುಗಾನಗೀತ ಪರಮ ವಿಖ್ಯಾತ || ಸಂಜೀವನವ ತಂದ ವೀರಹನುಮಂತ ಸದ್ಗುಣವಂತನೆ ಗುಣವಂತನೆ || ೧ || ಶಶಿಧರಾನ್ವಯದೂತ ಸೌಮಿತ್ರಿಯುವರೂಥ ಅಸಮಾಸ್ತ್ರ ಧೃತವೇದ ಅಮಿತಪ್ರಖ್ಯಾತ || ಸುಸುಗ್ರೀವ ಜಾಮಾತಾ ಮುಖ್ಯಪ್ರಾಣನಾಥ ಸದ್ಗುಣವಂತನೆ ಗುಣವಂತನೆ || ೨ || ಕ್ಷೋಣಿಯೊಳ್ ಕನಕದಾಸನು ನರಳು ಅನಕಾ | ಏನು ಬಲಿಸಿದಿಯೊ ಔಷಧಿಯ ತಾಣಕಾ || ನೀನಿದ್ದರೆ ಕನಕ ಪ್ರಾಣ ತೆರಳುವನಕಾ | ಶ್ರೀನಿಧೇ ಆದಿಕೇಶವ ಎನ್ನ ಜನಕಾ || ೩ ||

ಯಲ್ಲಿ ಈಗಲೂ ಓದಲ್ಪಡುವದು. ಪರಮಾತ್ಮನಿಗಿಂತಲೂ ಪರಮಾತ್ಮನ ದಾಸರೇ ಅಧಿಕರಾಗಿರುವರೆಂಬುದು ಈ ಕಥೆಯಿಂದ ವ್ಯಕ್ತವಾಗುತ್ತಿರುವದು. ಈ ಅಂಶ ವನ್ನೇ ಭೃಗು ಋಷಿಗಳ ಅಂಶಭೂತರಾದ ವಿಜಯದಾಸರು ತಮ್ಮದೊಂದು ಪದ್ಯ ದಲ್ಲಿ ಹೀಗೆ ಅಂದಿರುವರು:—

" ನಿನಗಂಜುವವನಲ್ಲ ನಿರ್ಜರೇಶ | ಮನ ವಚನ ಕಾಯದಲಿ ನಿನ್ನವರಿಗಂ ಜುವೆ || ಪಲ್ಲ || ಅನಪರಾಧಿಗಳಿಗಿನಿತಾಯಿತೋ ದೇವ | ಎನಗೆ ತನಗೆಂಬವರಿ ಗಾವ ಗತಿಯೋ || ಮಣಿದು ಬೇಡಿಕೊಂಬೆ ವಿಜಯ ವಿಠಲರೇಯ | ನಿನಗಿಂತ ನಿನ್ನ ದಾಸರ ಒಲಿಮೆ ಅಧಿಕಾ || ೧ || "

---

## ೨೧ನೆಯ ಕಥೆ.

—:(o):—

## ರಥವನ್ನು ನಡಿಸಿದ್ದು

ಒಮ್ಮೆ ತಿರುಪತಿಯಲ್ಲಿ ಶ್ರೀ ವೇಂಕಟಪತಿಯ ರಥೋತ್ಸವವು ನಡೆಯುತ್ತ ಲಿತ್ತು. ದೂರ ದೂರ ದೇಶದಿಂದ ಬಂದು ಜನಸಮೂಹವು ಕೂಡಿತು. ಮಂಗಲ ವಾದ್ಯಗಳು ಬಾರಿಸಹತ್ತಿದವು ಗಂಧೋದಕದ ಥಳಿಯಿಂದಲೂ, ಕಸ್ತೂರಿ ಕುಂಕುಮಗಳ ಸಾರಣೆಗಳಿಂದಲೂ ಚಿತ್ರವಿಚಿತ್ರವಾದ ರಂಗವಲ್ಲಿಗಳಿಂದಲೂ ಬೀದಿ ಗಳು ಗಮಘಮಿಸಹತ್ತಿದ್ದವು. ಪರಿಮಳವು ಸರಸರನೆ ನಾಲ್ಕೂಕಡೆಗೆ ಹಬ್ಬಿತು. ಒಂದು ಕಡೆಯಲ್ಲಿ ಬ್ರಾಹ್ಮಣರ ವೇದಘೋಷವು; ಮತ್ತೊಂದೆಡೆಯಲ್ಲಿ ಭಕ್ತಿರಸ ಪೂರಿತವಾದ ಭಕ್ತರ ಸಂಗೀತ ನಿನಾದವು; ಬೇರೊಂದೆಡೆಯಲ್ಲಿ ದೇವರ ದರ್ಶನ ಕ್ಕೆಂದು ಕೂಡಿದ ಜನರ ಕಲಕಲಾಟವು ಇವೆಲ್ಲ ಏಕತ್ರ ಕೂಡಿ ಸಮುದ್ರಘೋಷ ವನ್ನೇ ಧಿಕ್ಕಾರ ಮಾಡುವಂತಿದ್ದವು. ರಥವು ಶೃಂಗಾರವಾಗಿ ನಿಂತುಕೊಂಡಿತ್ತು. ಎಲ್ಲಿ ನೋಡಿದರೂ ಜಯ ಜಯ ಧ್ವನಿಯು. ದೇವರು ರಥಾರೋಹಣ ಮಾಡಿದನು. ಆಗ ಕೂಡಿದವರೆಲ್ಲರೂ ಒಮ್ಮೆಲೆ ಹಣ್ಣು ಕಾಯಿಗಳನ್ನು ಸಮರ್ಪಿಸಹತ್ತಿದರು. ಮಂಗಲಾರತಿಗಳನ್ನು ಮಾಡತೊಡಗಿದರು. ಹಾಡಿದರು. ಕುಣಿದರು. ಜಯ ಧ್ವನಿಯಂತೂ ಎಡೆಬಿಡದೆ ನಡೆದಿತ್ತು. ಯಥೋಚಿತವಾದ ಕಾರ್ಯಗಳೆಲ್ಲ ಮುಗಿ

ಹವು. ರಥವನ್ನು ಎಳೆಯುವದೊಂದೇ ಉಳಿಯಿತು. ಅದೂ ತಡವಾಗಲಿಲ್ಲ. ಸಾವಿರಾರು ಜನರು ರಥಕ್ಕೆ ಕೈ ಹಚ್ಚಿದರು. ತಾಸಾಯಿತು; ಎರಡು ತಾಸಾಯಿತು. ನೋಡುತ್ತಾರೆ! ರಥವು ಒಂದು ಹೆಜ್ಜೆಯನ್ನಾದರೂ ಮುಂದಿಟ್ಟಿರಲಿಲ್ಲ. ನೆರೆದವರೆಲ್ಲರೂ ಅರಗುಬೆರಗಾಗಿ ನಿಂತರು. ಸ್ವಾಮಿಯ ಪಾದಸನ್ನಿಧಿಯಲ್ಲಿ ಯಾವ ತಪ್ಪನ್ನು ಮಾಡಿರುವೆವೋ ಎಂಬ ಚಿಂತೆಯೇ ಎಲ್ಲರಲ್ಲಿಯೂ ಬಲವಾಗಿ ನಾಟಿತು. ರಥವು ಯಾಕೆ ನಡೆಯಲೊಲ್ಲದೆಂದು ಜನರು ತಮ್ಮತಮ್ಮೊಳಗೆ ಯೋಚಿಸಹತ್ತಿದರು. ಸಿದ್ಧಾಂತಿಗಳನ್ನು ಕೇಳಿದರು: ಜ್ಯೋತಿಷಿಗಳನ್ನು ವಿಚಾರಿಸಿದರು. ಯಾರಿಗೂ ತಿಳಿಯದು. ಮತ್ತೊಮ್ಮೆ ಪರೀಕ್ಷಿಸಿದರು. ಕನಕನು ಮಾತ್ರ ಇನ್ನೂ ಬಂದಿದ್ದಿಲ್ಲ. ಆತನು ಏನೋ ಕಾರಣದಿಂದ ತುಸು ಹಿಂದುಳಿದಿದ್ದನು. ಆದ್ದರಿಂದ ದಾವತಿಮಾಡಿ ಓಡಿಬಂದು ತಡಮಾಡಿದ್ದಕ್ಕಾಗಿ ತನ್ನ ತಪ್ಪನ್ನು ಕ್ಷಮಿಸಬೇಕೆಂದು ದೇವರನ್ನು ಬೇಡಿಕೊಂಡನು. ಮತ್ತು ರಥವು ನಡೆಯದೆ ಸ್ತಬ್ಧವಾಗಿ ನಿಂತದ್ದನ್ನು ನೋಡಿ ಆಶ್ಚರ್ಯಚಕಿತನಾಗಿ ಶ್ರೀವೆಂಕಟಪತಿಯನ್ನು ನುತಿಸಹತ್ತಿದನು. *

---

* ॥ಪದ॥ ರಾಗ—ತಾಳ

ಬಾರೊ ಭಾಗ್ಯದ ನಿಧಿಯೆ | ದಯಾಂಬುಧೆ ॥ಪ॥ ಬಾರೊಭಾಗ್ಯದನಿಧಿಯೆ| ಸಾರಿದಗೀಕ್ಷ್ಮಸುಧೆ | ವಾರಿಜಾರಿಕೌಮೋದಿ ವಾರಿಜಾಧರಮುದದಿ | ಸಾರಸಹೃದಯದಿ ಕೇರಿಕೇರಿಯಲಿ ಶೃಂ | ಗಾರದಿಮೆರೆವ ಅ | ಪಾರದಯಾನಿಧೆ ॥ಅ-ಪ॥

ವಿಜಯ ನಿಮ್ಮಯಪಾದ | ಭಜಕರಿಗೆ ಕೊಡಲಿ | ವಿಜಯದಶಮಿಯಲ್ಲಿ | ವಿಜಯರಥದಿಕೂತು | ವಿಜಯಳ ಸಹಿತದಿ | ವಿಜಯ ಮಾಡುತಬಾರೊ | ವಿಜಯಸಾರಥಿಇದಿ | ವಿಜಯರಥದಿ ಪರರವಿಜನನೀಸೋಲಿಸಿ | ತ್ರಿಜಗವಿಜಯವೇಷ| ವಿಜಯಗಿತ್ತು ಮೆರೆದೆ | ವಿಜಯಮೂರುತಿಯೆ ॥ ೧ ॥

ದಶದಶನಂದ ವಿಶಾ | ದಶಚಂದ್ರಶೇಖರದಾತ್ತ | ದಶದಿಕ್ಕ ಮಾರುತರು| ದಶವಿಶ್ವದೇವಯಾತ್ರಾ | ದಶನಾವಿಕಾಶರ್ವದಾ | ದಶಋಷಿಮುನಿನೃಪ | ದಶದಿಕ್ಕಿನ ಜನರು | ದಶಿಮಿಉತ್ಸವನೋಡಿ|ದಶದಿಶದಲಿ ನಿಂದು | ದಶಮತಿ ವಂದಿತ | ದಶಶಿರ ಸಂಹರ | ದಶರೂಪದಲಿಖಳ | ದಶನಮೂರುತಿಯೆಂದು ಹೆಸರು ಹೊರಳುವರು ॥೨॥

ಪದಮನಾಭಪದ್ಮೇಶ | ಪದುಮಮಾಲಿಸದ್ಮಾಕ್ಷ | ಪದುಮಪಾಣಿಪದ್ಮಾಂಘ್ರಿ | ಪದುಮಸಖಸುತೇಜಿ | ಪದುಮಕಲ್ಪದಿನಾಭಿ | ಪದುಮದಿಚತುರ್ಮುಖ | ಪದುಮಜನನಪಡದು | ಪದುಮಜಾಂಡವಡದಿ | ಪದುಮಪೀತನಹೃ | ತ್ಪದುಮದಿನ್ನಿನಪದ | ಪದುಮ ತೋರುತ ಬಾರೊಕಾಗಿನೆಲೆಇದಿಕೇಶವ ॥ ೩ ॥

ಕನಕನ ಭಕ್ತಿಯು ಇನ್ನೆಂಥಾದ್ದೋ ದೇವರ ಕರುಣವು ಅವನ ಮೇಲೆ ಇನ್ನೆಷ್ಟಿರುವದೋ ಸಾವಿರಾರು ಜನರಿಂದ ಒಂದುಹೆಜ್ಜೆಯನ್ನಾದರೂ ಇಡ ದಂಥ ರಥವು ಒಮ್ಮಿಂದೊಮ್ಮೆ ತನ್ನಿಂದತಾನೇ ಮುಂದಕ್ಕೆ ಸಾಗಿತು. ನೋಡ ಬಂದವರೆಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಎಲ್ಲರೂ ಕನಕನನ್ನು ನೋಡಹತ್ತಿದರು. ಸ್ತುತಿಸಹತ್ತಿದರು.

'ದೇವಬಲವಿದ್ದವನಿಗೆ ಯಾವ ಬಲಬೇಕು!'

ಜನನಿಯನು ಕಾಣದಿಹ ಬಾಲಕ | ನೆನೆನೆನೆದು ಹಲಬುತಿರೆ ಕತ್ತಲೆ |
ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲೀ ||
ತನಯನಂಬಿಗಿಡಪ್ಪಿರಂಬಿಸಿ | ಕನಲಿಕೆಯ ಕಳೆವಂತೆ ಮಧುಸೂ |
ದನನು ತನ್ನವರೆಡೆಗೆ ಬಂದೊದಗಿ ಸಲಹುವನು ||

(ಹರಿಕಥಾಮೃತಸಾರ)

---

## ೨೧ನೆಯ ಕಥೆ.

## ಸತ್ಸಂಗದ ಮಹಿಮೆ.

ಕನಕಪ್ಪನು ಸಂಚಾರ ಮಾಡುವಾಗ ಒಮ್ಮೆ ಒಂದು ದೊಡ್ಡ ಪಟ್ಟಣವನ್ನು ಸೇರಿದನು. ಪಟ್ಟಣವಾಗಲಿ-ಹಳ್ಳಿಯಾಗಲಿ ಆತನ ನಿಯಮಕ್ಕೆ ಭಂಗವಿಲ್ಲ. ಅದು ನಡದೇ ತೀರಬೇಕು. ನಿತ್ಯದಂತೆ ಮುಂಜಾನೆ ಎದ್ದವನೇ ತಂಬೂರಿಯನ್ನು ತಕ್ಕೊಂಡು ನಡೆದನು. ಆ ಊರಲ್ಲಿ ಒಬ್ಬ ಶ್ರೀಮಂತನು ಹುಟ್ಟಿ ದಾರಭ್ಯ ದಾನ-ಧರ್ಮವೆಂಬ ಶಬ್ದವನ್ನೇ ಕೇಳದೆ ಬಹು ಧನಾಢ್ಯನೆನಿಸಿಕೊಂಡಿದ್ದನು. ಅಂಥವನ ಮನೆಯೇ ಸಕೃದ್ದರ್ಶನಕ್ಕೆ ಈತನ ಪಾಲಿಗೆ ಬರಬೇಕೆ? ಅದೇನು ಕನಕಪ್ಪನ ದುರ್ದೈವವೋ ಅಥವಾ ಶ್ರೀಮಂತನ ಪರಿಪಕ್ವಕಾಲವೋ ವಾಚಕರಿಗೆ ಮುಂದೆ ತಾನೇ ತಿಳಿದು ಬರುವದು. ಹೇಗೇ ಆಗಲಿ ಕನಕದಾಸನು ನೆಟ್ಟಗೆ ಹೋಗಿ ತನ್ನ ತಂಬೂರಿಯನ್ನು ತೆಗೆದನು. ಶ್ರೀಮಂತನು ಇಂಥ ತಂಬೂರಿ-ಗಿಂಬೂರಿಗಳಿಗೆ

ಮರುಳಾಗತಕ್ಕವನಲ್ಲ. ದಾಸನನ್ನು ದಬ್ಬಿರೆಂದು ಹೇಳಿಬಿಟ್ಟನು. ದಾಸಯ್ಯನು ಅವನಿಗಿಂತ ಮೊಂಡನಾದನು. ಹೋಗುವದಿಲ್ಲೆಂದು ಉತ್ತರಕೊಟ್ಟನು. ಇದೇನು ಗತಿ! ಅವನ ಮನೆಯಲ್ಲಿಯೇ ನಿಂತು ಅವನಿಗೆ ಎದುರುತ್ತರ! ಹಾಗೆ ಮಾಡದಿದ್ದರೆ ವಿಧಿ ಇರಲಿಲ್ಲ ಶ್ರೀಮಂತನು ಈತನ ಉಪದೇಶವನ್ನು ಕಿವಿಗೆ ಹಾಕಿಕೊಳ್ಳುತ್ತಿದ್ದಿಲ್ಲ ಆಗ ಯಜಮಾನನು ಯೋಚಿಸಿದನು. ದಾಸರು ಗಟ್ಟಿಗರೆಂದು ತಿಳಿದು—ದಾಸರೇ ನಿಮ್ಮ ಇಂದೋಣವೇನು ಎಂದು ಪ್ರಶ್ನೆ ಮಾಡಿದನು ಕನಕಪ್ಪನು—"ಮಹಾರಾಯಾ! ನಾನೇನು ನಿನ್ನನ್ನು ದುಡ್ಡು-ದುಗಾಣಿ ಬೇಡಲಿಕ್ಕೆ ಬಂದಿಲ್ಲ; ಅರಿವೆ-ಅಂಚಡಿಗಳನ್ನು ಕೇಳುವದಿಲ್ಲ; ಹೊಟ್ಟೆಗೆ ಹಾಕೆನ್ನುವದಿಲ್ಲ. ಶ್ರೀ ಹರಿಪ್ರೇರಣೆಯಿಂದ ನಾನು ಹೇಳುವ ಎರಡುಪದಗಳನ್ನು ಸ್ವಸ್ಥ ಮನಸ್ಸಿನಿಂದ ಕೂತುಕೇಳು ಅಂದರಾಯಿತು. ಅದೇ ನನಗೆ ಪರಮ ಸಂತೋಷ." ಶ್ರೀಮಂತನು ಮನದಲ್ಲಿ ಹಿಗ್ಗಿದನು. ಇಲ್ಲಿಯ ವರೆಗೂ ಪದವನ್ನು ಕೇಳಿದರೆ ಎಲ್ಲಿ ಒಂದು ದುಡ್ಡು ಕೊಡಬೇಕಾಗುವದೋ ಎಂಬುದೊಂದು ಅವನಿಗೆ ಭಯವಾಗಿತ್ತು. ಈಗ ಅದು ಹೋದ್ದರಿಂದ—ದಾಸರೇ! ಹಾಗಾದರೆ ಬೇಕಾದಷ್ಟು ಪದಗಳನ್ನು ಹೇಳಿರಿ ಕೇಳುತ್ತೇನೆ ಎಂದು ಕೂಡಲೆ ಒಡಂಬಟ್ಟನು. ಕನಕಪ್ಪನಿಗೆ ಬೇಕಾದದ್ದೇನು? ಇಷ್ಟೇಅಲ್ಲವೇ! ಕೇವಲ ಐಹಿಕ ಸುಖದಲ್ಲಿಯೆ ಮಗ್ನವಾಗಿದ್ದ ಶ್ರೀಮಂತನ ಮನಸ್ಸನ್ನು ಕೊಂಚವಾದರೂ ಪಾರಮಾರ್ಥದ ಕಡೆಗೆ ಒಯ್ಯಬೇಕೆಂದು ಈತನ ಯೋಚನೆಯಾಗಿತ್ತು. ಶ್ರೀಮಂತನು ಪದಗಳನ್ನು ಕೇಳುತ್ತೇನೆ ಅಂದದ್ದೊಂದೇ ತಡ, ಕನಕಪ್ಪನ ಬಾಯಿಂದ ಅತ್ಯಪೂರ್ವವಾದ ರಾಗಮಾಲಿಕೆಯು ಹೊರಟಿತು. ಹೇಳಹತ್ತಿದನು.+

---

+ ॥ ರಾಗ ಮುಖಾರಿ. ಝಂಪೆ ತಾಳ.॥

ಏನು ಇಲ್ಲದ ಎರಡು ದಿನದ ಸಂಸಾರ | ಜ್ಞಾನದಲಿ ದಾನ-ಧರ್ಮವ ಮಾಡಿರಯ್ಯ ॥ ಪಲ್ಲ ॥ ಹಸಿದು ಬಂದವಗೆ ಅಶನವೀಯಲುಬೇಕು | ಶಿಶುವಿಗೆ ಪಾಲ್ಬೆಣ್ಣೆ ನಡಿಸಬೇಕು ॥ ಹಸನಾದ ಭೂಮಿಯನು ಧಾರೆಯೆರೆಯಲು ಬೇಕು | ಪುಸಿಯಾಡದಲೆ ಭಾಷೆ ನಡಿಯಲೇ ಬೇಕು ॥ ೧ ॥ ಕಳ್ಳತನಗಳ ಮಾಡಿ ಒಡಲ ಹೊರೆಯಲು ಬೇಡ | ಕುಳ್ಳಿರ್ದ ಸ್ಥಳದಿ ಕುಟಿಲ ಕೃತ್ಯ ಬೇಡ ॥ ಒಳ್ಳೆಯವ ನಾನೆಂದು ಬಲು ಹೆಮ್ಮೆಲಿತಬೇಡ | ಬಾಳ್ವೆ ಸ್ಥಿರವೆಂದು ನೀ ನಂಬಿ ಕೆಡಬೇಡ ॥ ೨ ॥ ಬೊರೆತನವು ಬಂದಾಗ ಕೆಟ್ಟ ನುಡಿಯಲಿ ಬೇಡ । ಸಿರಿ ಬಂದ ಕಾಲಕ್ಕೆ ಮೆರೆಯ ಬೇಡ ॥ ಸಿರಿವಂತನಾದರೆ ನೆಲೆಯಾದಿಕೇಶವನ | ಚರಣಕಮಲವ ಸೇರಿ ಸುಖಿಯಾಗು ಮನುಜಾ ॥ ೩ ॥

ಒಮ್ಮಿಂದೊಮ್ಮೆ ಶ್ರೀಮಂತನ ಮನಸ್ಸಿನ ಮೇಲೆ ಏನು ಪರಿಣಾಮವಾ ಯಿತೋ ನಮಗೆ ತಿಳಿಯದು. ಕನಕಪ್ಪನ ಎದುರಿಗೆ ಕೈ ಜೋಡಿಸಿಕೊಂಡು ನಿಂತು—'ಸ್ವಾಮಿ! ದಾಸರೇ! ನೀವು ಇನ್ನು ಎಂಟು ದಿವಸಗಳವರೆಗೆ ನಮ್ಮ ಮನೆಯಲ್ಲಿಯೇ ನಿಂತು ಹರಿಕೀರ್ತನೆಗಳಿಂದ ನನ್ನನ್ನು ಆನಂದಗೊಳಿಸಬೇಕು' ಎಂದು ಬೇಡಿಕೊಳ್ಳಹತ್ತಿದನು. ಕನಕಪ್ಪನಿಗೆ ಅತೀವ ಆಶ್ಚರ್ಯವಾಯಿತು. ಇದೇ ಈಗ ಒಂದೆರಡು ತಾಸುಗಳ ಹಿಂದೆ ಕೇವಲ ಮೋಹಪರವಶನಾಗಿ ದಾಸ ರನ್ನು ದಬ್ಬಿರೆಂದು ಹೇಳಿದ ಯಜಮಾನನು ಇಷ್ಟರಲ್ಲಿಯೇ ಅತ್ಯುದಾರಿಯಾಗಿ ಎದು ರಿಗೆ ಲೀನತೆಯಿಂದ ಬೇಡಿಕೊಳ್ಳುವಕನ್ನು ನೋಡಿ ಆನಂದಾಶ್ರುಗಳನ್ನು ಸುರಿಸಹತ್ತಿ ದನು. ಹರಿನಾಮ ಮಹಿಮೆಯು ಇನ್ನೆಂಥಾದ್ದೋ ಅದನ್ನು ಯಾರು ಹೇಳ ಬಲ್ಲರು? ಕನಕಪ್ಪನ ಆದರೋಪಚಾರಕ್ಕೆ ಎಣೆಯಿಲ್ಲದಾಯಿತು. ಶ್ರೀಮಂತನು ತನ್ನ ಇತರ ಉದ್ಯೋಗಗಳನ್ನು ಕೂಡಾ ಮರೆತು ಬಿಟ್ಟನು. ಕೂತಾಗ-ನಿಂತಾಗ ದಾಸರ ಪದಗಳನ್ನು ಕೇಳುವದಲ್ಲದೆ ಮತ್ತೊಂದಿಲ್ಲ. ಹೀಗಾಗಿ ಎಂಟು ದಿವಸದ ಮೇಲೆ ದಾಸರಿಗೆ ಬಹು ದೊಡ್ಡ ಸಂಭಾವನೆ ಮಾಡಿ ಅವರಿಂದ ಆಶೀರ್ವಾದವನ್ನು ಪಡೆದು ಕಳುಹಿಸಿದನು. ನೋಡಿದಿರೋ! ಸಾಧುಸಮಾಗಮವು ಹೇಗಿದೆ? ಅಂತೆ ಯೇ ದಾಸರು—

"ಅಜ್ಞಾನಿಗಳ ಕೂಡೆ ಅಧಿಕಸ್ನೇಹದಕಿಂತ | ಸುಜ್ಞಾನಿಗಳ ಕೂಡೆ ಜಗಳವೆ ಲೇಸು," ಎಂದು ಹೇಳಿಕೊಂಡಿದ್ದಾರೆ.

---

೨ ರಾಗ | ಮುಖಾರಿ | ಝಂಪೆ |

ಆರು ಸಂಗಡಬಾಹೊರಿಲ್ಲ | ನಾರಾಯಣನ ನಾಮನೆರೆಬಾಹೊದಲ್ಲದೆ ||ಪ||

ಗುರುಬಂಧು ಬುಧಜನರು ನಿಂತಗ್ನಿಸಾಕ್ಷ್ಯಾಗಿ | ಕರಹಿಡಿದು ಧಾರೆಯ ನೆರೆದುಕೊಂಡು ||ತರುಣಿ ಪ್ರಣಯನ ಹರಣಹೋಗಲು ತಾ ಕಂಡು | ಬರು ದಕ್ಕಿಂ ಜಿದಾರುಗತಿಯೆಂಬುವಳು || ೧ || ಮನೆಮಕ್ಕಳು ತಮ್ಮ ಧನಕೆ ಬಡದಾಡುವರು | ಧನಕಾಗಿ ನಿನ್ನನೆ ನಂಬಿದವರು || ಅನುಮಾನವ್ಯಾಕೆ ಜೀವನತೊಲಗಿದಾಕ್ಷಣದಿ | ಮುನ್ನೊಂದು ಅರಗಳಿಗೆ ನಿಲ್ಲಗೊಡರು || ೨ || ಸುತ್ತಲೆ ಕುಳ್ಳಿರ್ದ ಮಿತ್ರಬಾಂಧ ವರೆಲ್ಲ | ಹೊತ್ತು ಹೋಯಿತು ಹೊರಗೆ ಹಾಕೆನ್ನುವರು || ವಿತ್ತದಾಶಸಂಕಿತ ಅತ್ತ ತ್ತ ಈ ದೇಹ | ಹೊತ್ತುಕೊಂಡೊಯ್ದು ಅಗ್ನಿಯೊಳು ಬಿಸುಟುವರು. || ೩ ||

## ೨೨ನೆಯ ಕಥೆ.



## ಭಗವದ್ದರ್ಶನ.



ಕನಕಪ್ಪನು ಉಡುಪಿಯಲ್ಲಿ ಶ್ರೀ ವಾದಿರಾಜ ಸ್ವಾಮಿಗಳವರ ಸೇವೆಮಾಡಿ ಕೊಂಡು ಇರುತ್ತಿರಲು, ಒಂದಾನೊಂದು ದಿವಸ ಅವರು, ಕನಕನ ಯೋಗ್ಯತೆಯು ಪರಮಾವಧಿಯನ್ನು ಪರೀಕ್ಷಿಸಬೇಕೆಂದು ಇಚ್ಛಿಸಿ ಅವನನ್ನು ಏಕಾಂತದಲ್ಲಿ ಕರಿಸಿದರು. ಗುರುಗಳು ಏನಪ್ಪಣೆ ಮಾಡುವರೋ ಎಂದು ಕನಕನು ಕುತೂಹಲಗೊಂಡು ಕೈಜೋಡಿಸಿಕೊಂಡು ಬಂದು ನಿಂತನು. ಅವರು ಇಷ್ಟೇ ಹೇಳಿದರು;— 'ಅಯ್ಯಾ ಕನಕಾ! ನೀನು ಒಲಿಸಿಕೊಂಡ ಭಗವಂತನನ್ನು ನಮಗೊಮ್ಮೆ ಸಾಕ್ಷಾತ್ತಾಗಿ ತೋರಿಸಬೇಕು.' ಕನಕನು ಕಿವಿಗೊಟ್ಟು ಕೇಳಿದನು ಅಸಾಧ್ಯವಾದ

---

... ... ... ... ... ... ...

ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡಿ | ಪರಗತಿಗೆ ಸಾಧನವ ಮಾಡಿಕೊಳ್ಳೊ || ಕರುಣನಿಧಿ ಕಾಗಿನೆಲೆಯಾದಿಕೇಶವನ | ನಿರುತದಲಿ ನೆನೆನೆನೆದು ಸುಖಿಯಾಗೋ ಮರುಳೆ || ೫ ||



೩ ರಾಗ —ಮುಖಾರಿ ಝಂಪೆ.

ಇರಬಂದುದಿಲ್ಲ ಸಂಸಾರ | ಅರಿತು ಶ್ರೀ ಹರಿಗುಣವ ಭಜಿಸುವದು ಸಾರ||ಪ|| ಧರೆಯನಾಳಿದ ತ್ರಿಶಂಕು ಧೊರೆತಾನೆಲ್ಲಿ | ಹರಿಶ್ಚಂದ್ರ ಮೊದಲಾದ ಚಕ್ರವರ್ತಿಗಳೆಲ್ಲಿ || ಶರಧಿ ಮಧ್ಯದಲಿದ್ದ ರಾವಣಾಸುರನೆಲ್ಲಿ | ಸ್ಥಿರವುಳ್ಳ ಕೌರವರು ಪಾಂಡವರು ಎಲ್ಲಿ|| ೧ || ದಶರಥ ಮೊದಲು ಷೋಡಶರಾಯರುಗಳೆಲ್ಲ | ಅಸಹಾಯಶೂರರು ವೀರವಿಕ್ರಮರೆಲ್ಲಿ || ವಸುಧೆಯೊಳಗಿದ್ದ ಹದಿನಾರುಸಾವಿರವೆಲ್ಲಿ | ಸುಶರೀರನೆನಿಸಿದಾ ಅಭಿಮನ್ಯು ತಾನೆಲ್ಲಿ || ೨ || ಈ ಪರಿ ಈ ಧರೆಯನಾಳಿ ಹೋದವರೆಷ್ಟು | ಈ ಪರಿಯು ಸ್ವರ್ಗಕ್ಕೆ ಇಂದ್ರಾದಿಗಳು ಎಷ್ಟು || ಈ ಪರಿಹರಬ್ರಹ್ಮರಾದವರು ತಾವೆಷ್ಟು | ಶ್ರೀಪತಿಕಾಗಿನೆಲೆಯಾದಿ ಕೇಶವನನ್ನೇ ಭಜಿಸೊ || ೩ ||

ಅಪ್ಪಣೆ. ಆಹಾ! ಶ್ರೀಗಳವರು ಎಂಥಾ ಅಪ್ಪಣೆ ಮಾಡಿದರಲ್ಲಾ ಇದನ್ನು ಹೇಗೆ ನೆರವೇರಿಸೇನು! ಎಂಬದಾಗಿ ಹಲವು ಆಲೋಚನೆಗಳು ಅವನ ಮನಸ್ಸಿನಲ್ಲಿ ತುಂಬಿದವು. ಆಗ ಅವನು ಗುರುಗಳಿಗೆ ಸಾಷ್ಟಾಂಗವೆರಗಿ—ಸ್ವಾಮಿ, ಗುರುಗಳೇ! ತಮ್ಮ ಈ ಅಪ್ಪಣೆಯನ್ನು ಕೊನೆಗಾಣಿಸಲಿಕ್ಕೆ ನಾನೆಷ್ಟರವನು? ನನ್ನ ಯೋಗ್ಯತೆಯೇನು? ಜಗಚ್ಚಾಲಕನಾದ ಶ್ರೀ ಪರಮಾತ್ಮನೇ ಅಂತಃಕರಣದಿಂದ ತಮ್ಮ ಕೂಡ ಲೀಲಾವಿನೋದವಾಡುತ್ತಿರಲು ಪಾಮರನಾದ ನನ್ನನ್ನೇಕೆ ನಿಮಿತ್ತ ಮಾಡಿದಿರಿ? ನಾನೇನೋ ಭಕ್ತಿಯಿಂದ ಭಗವಂತನಿಗೆ ಮೊರೆಯಿಡುತ್ತಿದ್ದೇನೆ. ಆದರೆ ಆತನನ್ನು ಪ್ರತ್ಯಕ್ಷ ತೋರಿಸೇ ತೀರೇನೆಂಬ ಸಾಹಸವನ್ನು ಮಾತ್ರ ತಮ್ಮೆದುರಿಗೆ ಮೆರಿಸಲಾರೆನು. ಗುರ್ವನುಗ್ರಹವಿದ್ದಂತಾಗಲಿ. ಎಂದು ನುಡಿದು ತದೇಕ ಧ್ಯಾನದಿಂದ ದೇವರನ್ನು ಬೇಡಿಕೊಳ್ಳ ಹತ್ತಿದನು. ಮುಂದೆ ನಾಲ್ಕಾರು ದಿನಗಳು ಕಳೆದವು. ಒಂದುದಿವಸ ಶ್ರೀಗಳವರು ಶ್ರೀ ಕೃಷ್ಣನನ್ನು ಪೂಜಿಸಿ ಗಂಧಮಾಲ್ಯಾದಿಗಳಿಂದ ಅಲಂಕೃತ ಮಾಡುವ ಸಮಯ. ಗಂಡಸರು-ಹೆಂಗಸರು ಅನೇಕರು ಸ್ನಾನ ಮಾಡಿ ಮಡಿ ಬಟ್ಟೆಗಳನ್ನುಟ್ಟುಕೊಂಡು ನೆರೆದಿದ್ದರು. ಶಿಷ್ಯರು ಮಹಾನೈವೇದ್ಯವನ್ನು ತಂದಿಡುವ ಭರದಲ್ಲಿ ಸರಿಯಿರಿ-ಮುಟ್ಟೀರಿ ಎಂದು ಗದ್ದರಿಸುತ್ತ ನಡೆದಿದ್ದರು. ಇಂಥಾ ವ್ಯಾಳ್ಯದಲ್ಲಿ ಅಂಗಿ-ಟೊಪ್ಪಿಗೆಗಳನ್ನು ಹಾಕಿಕೊಂಡು-ಮೈಮೇಲೆ ರತ್ನ ಖಚಿತವಾದ ಆಭರಣಗಳನ್ನು ಹೇರಿಕೊಂಡು ಅಂಬೆಗಾಲಿಕ್ಕುತ್ತ ಮುಗುಳುನಗೆಯಿಂದೊಡಗೂಡಿದ ಒಂದು ಸಣ್ಣ ಮಗುವು ಬ್ರಾಹ್ಮಣರ ಮಧ್ಯದಲ್ಲಿಯೇ ಪ್ರವೇಶಿಸಿ ಬಿಟ್ಟಿತು. ಮೈಲಿಗೆಯಾಗುವದೆಂದು ಎಲ್ಲರೂ ದೂರ ಸರಿಯಹತ್ತಿದರು. ಯಾರ ಮಗುವಿದು! ಬೇಗನೆ ಕರಕೊಳ್ಳಿರೆಂದು ಕೂಗಹತ್ತಿದರು ಅಷ್ಟರಲ್ಲಿ ಅದು ಶ್ರೀಗಳವರ ತೀರ ಹತ್ತಿರ ಹತ್ತಿರಕ್ಕೆ ಬಂದಿತು. ಇನ್ನೇನು ಸ್ವಲ್ಪ ತಡೆದರೆ ಅವರನ್ನು ಮುಟ್ಟಿ ಬಿಡುವದು. ಮುಂದೇನು ಗತಿ? ಕೂಸನ್ನು ಕರಕೊಳ್ಳುವವರು ಯಾರೂ ಬರಲಿಲ್ಲ. ಯಾರ ಮಗುವೋ ಇದನ್ನು ಹೀಗೇಕೆ ಬಿಟ್ಟುಬಿಟ್ಟರೋ ಎಂಬದಾಗಿ ಎಲ್ಲರೂ ಒಂದೇ ಧ್ವನಿಯಿಂದ ಒದರಾಡ ಹತ್ತಿದರು. ಆ ಧ್ವನಿಗೆ ಕೂಸು ಗಾಬರಿಯಾಗಿ ದುಡುದುಡನೆ ಪಾಯಸದ ಪಾತ್ರೆಯಲ್ಲಿ ಕೈಯಿಕ್ಕುತ್ತ ಬಂದಹಾದಿಯಿಂದ ಹಿಂದಕ್ಕೆ ತಿರುಗಿ ಬಿಟ್ಟಿತು. ಆಗಂತೂ ಜನರ ಕೋಲಾಹಲವನ್ನು ಹೇಳಲಾಸಲ್ಲ. ಎಲ್ಲವೂ ಅಪವಿತ್ರವಾಗಿ ಹೋಯಿತೆಂದೇ ಕೂಗಾಟ. ಮಾತ್ರೊಂದಿಲ್ಲ. ಶ್ರೀಗಳವರು ಮಾತ್ರ ಮಗುವಿನ ಆಟವನ್ನು ಎವೆಯಿಕ್ಕದೆ ನೋಡಿ ನಗಹತ್ತಿದರು. ಕನಕನ ಆಮಂತ್ರಣವನ್ನು ಸ್ವೀಕರಿಸಿ ಕೃಷ್ಣಮೂರ್ತಿಯೇ

ಇಂದು ಪ್ರತ್ಯಕ್ಷನಾಗಿ ಬಂದಿರುವನೆಂಬ ವಿಷಯವು ಅವರಿಗೆ ಹೊಳೆದುಹೋಯಿತು. ಮಗುವಿನ ರೂಪವನ್ನೇ ದಿಟ್ಟಿಸಿ ನೋಡುತ್ತ ಅದರ ಬೆನ್ನ ಹಿಂದಿಂದೆ ಹೊರಟರು. ಪ್ರತ್ಯಕ್ಷ ಕೃಷ್ಣನೇ ಬಂದಿರಲು ಕೃಷ್ಣಪ್ರತಿಮೆಯನ್ನು ಪೂಜೆಮಾಡುವದೇನೆಂದು ಶ್ರೀಗಳವರ ಯೋಚನೆಯಾಗಿತ್ತು. ಸಾಮಾನ್ಯ ಜನರಿಗೆಲ್ಲ ಇದು ಹೇಗೆ ತಿಳಿಯಬೇಕು? ಮೈಲಿಗೆಯಾದ್ದರಿಂದ ಶ್ರೀಗಳವರು ಎದ್ದು ಹೋದರೆಂದೂ ಆ ಮಗುವಿನ ಪಾಲಕರಿಗೆ ಯೋಗ್ಯ ಶಾಸನ ಮಾಡುವರೆಂದೂ ಮನಸ್ಸಿನಲ್ಲಿ ಗುಣಿಸುತ್ತ ಸ್ವಸ್ಥವಾಗಿ ಕುಳಿತಲ್ಲೇ ಕುಳಿತುಬಿಟ್ಟಿದ್ದರು ಮಗುವು ತನ್ನ ಸ್ವಭಾವದಂತೆ ತಿರುತಿರುಗಿ ನೋಡುತ್ತ ನೆಟ್ಟಗೆ ಹೊರಗೆ ಕುಳಿತಿರುವ ಕನಕಪ್ಪನಸಮಿಪಕ್ಕೆ ಬಂತು. ಕೂಡಲೆ ಕನಕಪ್ಪನು ಎದ್ದು ಮಗುವಿಗೆ ಸಾಷ್ಟಾಂಗವಾಗಿ ವಂದಿಸಿ ಹರಿಕೀರ್ತನೆಯನ್ನು ಪಾಡುತ್ತ ಕುಣಿಯ ಹತ್ತಿದನು. †

ಎಲ್ಲರೂ ಬೆರಗಾದರು. ಇದೇನು ದೇವರ ಮಾಯವೋ ಎಂದು ಪ್ರತಿಯೊಬ್ಬರೂ ಮಗುವಿನ ದರ್ಶನಕ್ಕೆ ಬಂದರು. ನೋಡುತ್ತಾರೆ ಅಲ್ಲಿ ಮಗುವು ಇಲ್ಲೇ ಇಲ್ಲ. ಕನಕನೊಬ್ಬನು ಕುಣಿಯುತ್ತಾನೆ. ಅತ್ಯಂತ ಸೋಜಿಗವಾಯಿತು.

---

† ರಾಗ—ಪೂರ್ವಿ ಏಕತಾಳ

ಮಗುವು ಕಾಣಿರಯ್ಯಾ | ಮಾಯದ ಮಗುವು ಕಾಣಿರಯ್ಯಾ | ಸುಗುಣವಾದಿರಾಜರೆ ಮೂಜಗವನು ತನ್ನುದರದೊಳಿಟ್ಟ || ಪಲ್ಲ ||

ಮಾಯಾಪೂತನಿಯಕೊಂದು | ಕಾಯುವ ಕೆಡಹಿಶಕಟನ್ನ | ಸಾಯಬಡಿದು ಧೇನುಕನವೃಷಭಾಸುರನಾ || ನೋಯನೆ ಇದದೆಮಳಾರ್ಜುನರಿಗೆ | ಸಾಯುಜ್ಯವನೆ ಇತ್ತು ತನ್ನ ತಾಯಿ ಗೆ ತಾಮುಣ್ಣಮೆದ್ದು ವೆ ದ್ದು ಬಾಯಿಬಿಟ್ಟು ತೋರಿಸಿದಾ || ೧ ||

ಏಕಾರ್ಣವಾಗಿಯೆ ಸಕಲಲೋಕವು | ಆಕಾರವಳಿಯೆ ಏಕವೇವ ದ್ವಿತೀಯವೆಂಬಾಗಮಕೆ ಸರಿಯಾಗಿ | ಶ್ರೀಕರಾಂಬುಜದಿಂ ಪಾದಾಂಗುಲಿಯ ಪಿಡಿದು ಬಾಯೊಳಿಟ್ಟು | ಶ್ರೀಕಾಂತವಟದೆಲಿಯ ಮ್ಯಾಲೊರಗಿ ಬ್ರಹ್ಮನ ಪಡೆದ || ೨ ||

†‡† †‡† ‡†‡ †‡† †‡†

ಶ್ರುತಿತಲೆಗೆ ಗೋಚರಿಸಿದ ಅಚ್ಯುತನು ಭುವನಾದಿಮೂರ್ತಿಕರತಿಪತಿಪಿತನು ಶೇಷಾದ್ಯಾರಾಧ್ಯನು || ಕ್ಷಿತಿಗಧಿಕನೆನಲಾಪುರದ ಪತಿವೈಕುಂಠ ಕೇಶವನು | ಯತಿಯೆ ನೀನೋಡಯ್ಯ ಶರಣಾಗತನ ತೊಡೆಯಿಂ ಮಾಯವಾದ || ೪ ||

ಗುರುಗಳಿಗೆ ಬೇಡಿಕೊಂಡರು. ಇದರ ಮರ್ಮವನ್ನು ತಿಳಿಸಬೇಕೆಂದು ಶ್ರೀಗಳವರು ಕನಕನನ್ನು ಮನದಣಿಯಾಗಿ ಹೊಗಳಿ ಮಗುವು ಕೈಯೂರಿದ ಪಾಯಸದ ಪಾತ್ರೆಯನ್ನು ಎಲ್ಲರಿಗೂ ತೋರಿಸಿದರು. ಅದರಲ್ಲಿ ಶಂಖ-ಚಕ್ರದ ಗುರುತುಗಳು ಮೂಡಿದ್ದವು. ಜನರು ಹೌಹಾರಿ ನಿಂತರು. ಆಗ ಅವರಿಗೆ ಬೋಧವಾಯಿತು. ಅಯ್ಯೋ! ಪರಮಾತ್ಮನು ಪ್ರತ್ಯಕ್ಷ ದರ್ಶನವನ್ನು ಕೊಡುವದಕ್ಕೆ ಬಂದಿರಲು ಬುದ್ಧಿಗೇಡಿಗಳಾದ ನಾವು ಅತನನ್ನು ತಿಳಿಯದೆ ಹೋದೆವಲ್ಲಾ ಎಂದು ಮರುಗಹತ್ತಿದರು. ಕನಕನ ಧನ್ಯವಾದವನ್ನು ಮಾಡಹತ್ತಿದರು.

ಮುನಿಗಳು ಮನದಲ್ಲಿ ನುತಿಸಲರಿಯದ ಮಹಾಮಹಿಮ ನಿನ್ನ |
ಉಪನಿಷಗಳು ತುತಿಸಲರಿಯದ ಮಹಾ ಮಹಿಮ ನಿನ್ನ |
ಸಕಲ ಶೃತುರಾಶಿಗಳು ತುತಿಸಲರಿಯದ ಮಹಾಮಹಿಮ ನಿನ್ನ |
ಎತ್ತಿಕೊಂಡು ಜೋಗುಳಾಡುವ ನೊಲೆಯಾಡುವ ಮೊಗನೋಡುವಗೋಪೀ
ದೇವಿ ಪುಣ್ಯವೆಂಥಾದ್ದೊ ಅಚಲಾನಂದ ವಿಠಲಾ ||

ಎಂಬ ದಾಸೋಕ್ತಿಯಂತೆ ಪರಮಾತ್ಮನನ್ನು ಕಣ್ಣಾರೆ ಕಂಡುಕೊಂಡು ವಿನೋದವಾಡಿದ ಕನಕಪ್ಪನ ಪುಣ್ಯವು ಇನ್ನೆಂಥಾದ್ದಿರಬೇಕೋ!

ಈ ಪ್ರಕಾರ ಕನಕನು ಭರತಖಂಡದೊಳಗಿನ ಯಾವತ್ತು ತೀರ್ಥ-ಕ್ಷೇತ್ರಗಳನ್ನು ಚರಿಸುತ್ತ ಅಲ್ಲಲ್ಲಿ ಅನೇಕ ದೇವರ ಸ್ತೋತ್ರಗಳನ್ನು ಮಾಡಿರುವನು. ಈತನ ದೇವರ ನಾಮಗಳಲ್ಲಿ ಅನೇಕಾನೇಕ ಚಿತ್ರಗಳು ಸುಂದರವಾಗಿ ರೇಖಿಸಲ್ಪಟ್ಟಿರುವವು. ಅವುಗಳನ್ನೆಲ್ಲ ಸೂಕ್ಷ್ಮದರ್ಶಕದಲ್ಲಿ ಅಥವಾ ರಾವುಗನ್ನಡಿಯಲ್ಲಿಟ್ಟು ತೋರಿಸುವದೂ ನಮ್ಮಂಥ ಪಾಮರರ ಕೆಲಸವಲ್ಲ. ತಿಳಿದಮಟ್ಟಿಗೆ ಒಂದೆರಡನ್ನು ಕೆಳಗೆ ತೋರಿಸುವೆವು.

೧ ರಾಗ,—ಕಲ್ಯಾಣಿ ಝಂಪೆ.

ಏನೆಂದು ಕೊಂಡಾಡಿ ಸ್ತುತಿಸಲೊ ದೇವಾ | ನಾನೇನು ಬಲ್ಲೆ ನಿಮ್ಮ ಮಹಿಮೆಗಳ ಘನವಾ || ಪಲ್ಲ || ಹರಿಮುಕುಂದನು ನೀನು | ನರಜನ್ಮಹುಳು ನಾನು | ಪರಮಾತ್ಮ ನೀನು ಬಾ | ಮರನು ನಾನು || ಗರುಡಗಮನು ನೀನು| ಮರುಳುಪಾಪಿಯು ನಾನು | ಪರಂಜ್ಯೋತಿಯು ನೀನು | ತಿರುಕನು ನಾನು || ೧ ||

ಸ್ವಾಹಂಕಾರ ಖಂಡನವನ್ನು ಮಾಡಿಕೊಂಡು ದಾಸಭಾವವನ್ನು ತೋರಿಸಿದ ಚಿತ್ರವಿದು. ಹಿಂದಕ್ಕೆ ಶ್ರೀಪಾದರಾಯ ಸ್ವಾಮಿಗಳವರು:—"ಕುರುಡನಾಯಿ

ಸಂತೆಗೆ ಬಂತಂತೆ | ಅದು ಯಾತಕೆ ಬಂತೊ '' || ಎಂಬ ಪದದಿಂದಲೂ—ಶ್ರೀ ವ್ಯಾಸರಾಯರವರು:—"ನಾನೆಲ್ಲಿ ಜ್ಞಾನಿಯು ನಾನೆಲ್ಲಿ ಸುಜನ | ಹೀನವಿಷಯ ಗಳುಂಬ ಶ್ವಾನನಂತಿರುವೆ" || ಎಂಬ ಪದದಿಂದಲೂ ಸ್ವಾಹಂಕಾರ ಖಂಡನಮಾಡಿ ಕೊಂಡದ್ದು ಕಂಡು ಬರುವದು. ಗುರುಭಕ್ತನಾದ ಈತನಾದರೂ ಅವರ ಅನು ಕರಣವನ್ನೇ ಮಾಡಿ ಅವರಿಗಿಂತಲೂ ಹೆಚ್ಚಾದ ಚಿತ್ರವನ್ನು ಚಿತ್ರಿಸಿರುವನು.

೨ ರಾಗ:—ಪೂರ್ವಿ ಏಕತಾಳ.

'ಮಗುವು ಕಾಣಿರಯ್ಯಾ | ಮಹಾಯುಕ | ಮಗುವು ಕಾಣಿರಯ್ಯಾ || ಪ ||

ಇದರಲ್ಲಿ ಕನಕಪ್ಪನ ಭಕ್ತ್ಯತಿಶಯದ ಚಿತ್ರವು ತೋರಿಸಲ್ಪಟ್ಟಿರುವದು. ಭಕ್ತಿಯಿಂದ ಭಗವಂತನನ್ನು ಒಲಿಸಿಕೊಂಡವರಿಗೆ ಆತನು ಯಾವಾಗಲೂ ಎದುರಿಗೇ ಇರುವನು. ಶ್ರುತಿ-ಸ್ಮೃತಿಗಳು ಕರತಲಾಮಲಕವಾಗುವವು ಎಂಬುದೇ ಇದರ ಲ್ಲಿಯ ಚಿತ್ರ. ಇಲ್ಲವೆ ಹೋದ ಪಕ್ಷದಲ್ಲಿ ರಾಮ ಶಬ್ದವನ್ನು ಅರಿಯದಂಥ ಪಾಮರನಿಂದ ಇಂತಹ ವೇದವಾಣಿಯು ಹೇಗೆ ಹೊರಟೀತು? ಶ್ರೀ ವಾದಿರಾಜ ಗುರುಗಳಂಥವರಿಂದಲೂ ಹೇಗೆ ಹೊಗಳಿಸಿಕೊಂಡಾನು?

೩ ರಾಗ—ಕಾಂಬೋದಿ ಝಂಪೆ.

'ನಾರಾಯಣನೆಂಬ ನಾಮದ ಬೀಜವನು ನಾಲಿಗೆಯು | ಕೂರಿಗೆಯ ಮಾಡಿ ಬಿತ್ತಿರೈಯ್ಯಾ || ಪಲ್ಲ ||

ಜ್ಞಾನಹೀನರಾದವರೂ ಕೂಡ ಭಕ್ತಿಯಿಂದ ಭಗವಂತನನ್ನು ಭಜಿಸಿ ಮುಕ್ತಿ ಪಡೆಯಲೆಂಬ ಉದಾತ್ತ ಭಾವನೆಯುಳ್ಳ ಕರುಣಾರಸದ ಚಿತ್ರವಿದು.

೪ ರಾಗ:—ಕೇದಾರಗೌಳ ಅಷ್ಟತಾಳ.

'ಬಂದಿದೆ ದೂರು ಪಾಂಡವರ್ಗೆ | ಕೊಂದಿರುವರು ಕೌರವರನೆಂಬ ಅಪ ಕೀರ್ತಿ || ಪಲ್ಲ ||

ರಾಗ.—ಮುಖಾರಿ ಝಂಪೆ.

'ಬೊಂಬೆಯ ಆಟವನಾಡಿಸಿದನು ಭಾರತವಾ | ಅಂಬುಜಭವಾದಿ ಅಮ ರೇಂದ್ರ ರೀಕ್ಷಿಸಲು || ಪಲ್ಲ ||

ಮಹಾಭಾರತವನ್ನು ವಿಮರ್ಶಿಸಿ ತೆಗೆದ ಚಿತ್ರವಿದು. ಪಂಚಮವೇದವೆನಿಸಿ ಕೊಂಡ ಭಾರತದಂಥ ಉದ್ಗ್ರಂಥವನ್ನು ವಿಮರ್ಶಿಸಬೇಕಾದರೆ ಭಗವದನುಗ್ರಹ ದಿಂದುಂಟಾದ ದಿವ್ಯ ಜ್ಞಾನವಿಲ್ಲದೆ ಆಗಲಾರದು.

೫ ರಾಗ —ಕಾಂಬೋದಿ ರೂಪಕ.

'ಸಹಜವಿದು ಈ ನುಡಿಯು ಸಟೆಯು ಮಾತಲ್ಲ | ಮಹಿಯೊಳಗೆ ಪೇಳುವೆನು ವಿಹಿತವಾಕ್ಯಗಳಾ|| ಪಲ್ಲ || ಶ್ರುತಿ-ಶಾಸ್ತ್ರ-ಪುರಾಣ ವೋದುವವನೇಶೂದ್ರ| ಅತಿಥಿಗಾದರಿಸುವನೆ ಅತಿ ಲುಬ್ಧನು || ಪ್ರತಿದಿವಸ ಸಂಧ್ಯಾವಂದನೆಮಾಡುವ ಪಾಪಿ | ಪತಿಯಾಜ್ಞೆಯಿಂದಿಹಳೆ ಪರಮಘಾತಕಿಯು' || ೧ ||

ರಾಗ —ಮಧ್ಯಮಾವತಿ ಝಂಪೆ.

'ಕಲಿಯೇರಿ ಬಂತು ನಾಕಡೆಹಾಯ್ದುದೆಂತಯ್ಯಾ | ಜಲಜಲೋಚನ ಎನ್ನ ಸಲಹಬೇಕಯ್ಯಾ' || ಪಲ್ಲ ||

ಲೋಕಸಂಗ್ರಹವನ್ನು ಮಾಡಿ ಜನರ ಅಂತರಂಗ ಸ್ಥಿತಿಯನ್ನು ರೇಖಿಸಿದ ಚಿತ್ರಗಳಿವು.



---

ಮೇಲೆ ಸೂಚಿಸಿದ ಪದಗಳೆಲ್ಲ (ಉಡುಪಿ ಪಾವಂಜೆ ಗುರುರಾಯರು ಛಾಪಿಸಿದ ಕನಕದಾಸನ ಕೀರ್ತನೆಗಳು ) ಎಂಬ ಪುಸ್ತಕದಲ್ಲಿ ಸಿಗುವವು.

# ೩ನೆಯ ಭಾಗ.



ತನುವಿಲ್ಲದಲ್ಲಿ ಪ್ರಾಣಪ್ರತಿಷ್ಠೆಯ ಕಟ್ಟೆ | ಯನುಗೊಳಿಸದಾರುರಸಸ್ಥಾಪ ಪನೆಯ ಭಿತ್ತಿಯೊಂ | ದಿನಿಸಿಲ್ಲದತಿ ಚಿತ್ರಮಂ ರೂಪುದೋರದೆಡೆಯೊಳ್ ಪಲವ ಲಂಕಾರಮಂ || ಮನೆಯಿಲ್ಲದರ್ಥಸಂಚಿತವನುಂ ಮೇರೆಯಿಂದ | ದನುಪಮಕ್ರಿಯೆ ಗಳಂ ನಡೆಯಿಪ ಕವೀಶ್ವರರ | ಘನತೆಯಂ ಬಣ್ಣಿಸುವರಾರಾನೆ ಹೋದುಡೆ ಬೀದಿ ಯುಲ್ಲವೆ ಜಗದೊಳು || ೧ ||

( ನಂದೀಮಾಹಾತ್ಮ್ಯ. )

ಇಲ್ಲಿಯವರೆಗೆ ಯಥಾಮತಿ ಕನಕದಾಸನ ಮಹಾತ್ಮ್ಯಗಳನ್ನು ವಿಸ್ತರಿಸಿದ್ದಾಯಿತು. ಇನ್ನು ಈ ಭಾಗದಲ್ಲಿ ಆತನ ಕಾಲವಿಚಾರ-ಗ್ರಂಥಗಳು ಮೊದಲಾದುವನ್ನು ತುಸುಮಟ್ಟಿಗೆ ವಿವೇಚಿಸಿ ಈ ಗ್ರಂಥವನ್ನು ಮುಗಿಸುತ್ತೇವೆ.

## ಗ್ರಂಥಗಳು.

ಇತರ ಹರಿದಾಸರಂತೆ ಈತನು ದಾಸನಾಗಿ ಬರೇ ದೇವರ ನಾಮುಗಳನ್ನು ಹೇಳಿ ಬಿಡಲಿಲ್ಲ. ಅನೇಕ ಗ್ರಂಥಗಳನ್ನು ಬರೆದನು.' ಇದರಿಂದ ಇವನ ಹೆಸರು ಕರ್ಣಾಟಕದಲ್ಲಿ ಆಚಂದ್ರಾರ್ಕವಾಗಿರುವದು. ಕನ್ನಡ ವಾಙ್ಮಯದಲ್ಲಿ ಒಳ್ಳೊಳ್ಳೇ ಪಂಡಿತರಾದ ಪ್ರಸಿದ್ಧ ಕವಿಗಳು ರಾಜಾಶ್ರಯದಿಂದಲೋ ಲೋಕಾಶ್ರಯದಿಂದಲೋ ಬಹಳ ಪರಿಶ್ರಮಮಾಡಿ ಗ್ರಂಥಗಳನ್ನು ಬರೆದಿರುವರು. ಈತನಾದರೋ ಓದು-ಬರಹವನ್ನು ಕೂಡಾ ಕಲಿಯದೆ, ಯಾರ ಆಶ್ರಯವನ್ನು ಹೊಂದದೆ ಶ್ರಮಪಡದವನಂತೆಯೇ ಗ್ರಂಥ ಬರೆದದ್ದನ್ನು ನೋಡಿದರೆ, ವರಕವಿಯೆಂಬುದರಲ್ಲಿ ಅವಸಂದೇಹವೂ ಇಲ್ಲ. ಈತನ ಗ್ರಂಥಗಳೆಂದರೆ—ಮೋಹನತರಂಗಿಣಿ, ನಳಚರಿತ್ರ, ರಾಮಧಾನ್ಯಚರಿತ್ರ, ಹರಿಭಕ್ತಿಸಾರ, ನೃಸಿಂಹಸ್ತವ ಎಂಬವು.

ಮೋಹನತರಂಗಿಣಿ—ಇದನ್ನು ಎಲ್ಲಿ-ಯಾಕೆ ಬರೆದನೆಂಬದನ್ನು ೧೯ನೇ ಕಥೆಯಲ್ಲಿ ವಿಸ್ತರಿಸಿದ್ದೇವೆ. ಈ ಗ್ರಂಥವು ಸಾಂಗತ್ಯರೂಪವಾಗಿ ಕೃಷ್ಣಚರಿತ್ರವನ್ನು ಬಣ್ಣಿಸುವದು. ಇದರಲ್ಲಿ ೪೨ ಸಂಧಿಗಳೂ ೨೭೦೫ ಪದ್ಯಗಳೂ ಉಂಟು. ಇದರ ಉತ್ಕೃಷ್ಟತೆಯನ್ನು—

ಹರಿಶರಣರ ಪೆರ್ಚು ಬುಧಜನರಿಗೆ ಮೆಚ್ಚು | ದುರಿತಾಟವಿಗೆ ಕಾಳ್ಕಿಚ್ಚು ||
ವಿರಹಿಗಳಿಗೆ ಮಚ್ಚು ವೀರರ್ಗೆ ಪುಚ್ಚು ಕೇ | ಳ್ವರಿಗಿದುತನಿ ಬೆಲ್ಲದಚ್ಚು ||

ಎಂಬದಾಗಿ ಹೇಳಿಕೊಂಡದ್ದು ಸುಮ್ಮನೆ ಡಂಭಾಚಾರಕ್ಕಲ್ಲ; ಕವಿಸಾಂಪ್ರದಾಯವೂ ಅಲ್ಲ; ಸ್ವಾಹಂಕಾರವಂತೂ ಅಲ್ಲವೇ ಅಲ್ಲ. ಅಕ್ಷರಶಃ ನಿಜವಾಗಿರುವದು. ಅದಷ್ಟು ತಿಳಿಗನ್ನಡ ಶಬ್ದಗಳನ್ನೇ ತಕ್ಕೊಂಡು ಪ್ರತಿಯೊಂದು ವರ್ಣನಾಭಾಗವೂ ಅತ್ಯಂತ ಮನೋಹರವಾಗುವಂತೆ ಬಹು ಕುಶಲತೆಯಿಂದ ರಚಿಸಿದ ಕವಿಚಾತುರ್ಯವನ್ನು ಎಷ್ಟು ಹೊಗಳಿದರೂ ಸ್ವಲ್ಪವೇ ಸರಿ ಇಂಥಾ ಅಪೂರ್ವ ಗ್ರಂಥವನ್ನು ಕನ್ನಡದ ಅಭಿಮಾನಿಗಳು ಒಂದೇ ಒಂದು ಬಾರಿಯಾದರೂ ಓದಿ ಅದರ ಸವಿಯನ್ನು ಕಂಡುಕೊಳ್ಳಬೇಕೆಂದು ವಿನಯಪೂರ್ವಕವಾಗಿ ವಿಜ್ಞಾಪಿಸಿಕೊಳ್ಳುವೆವು.

ಇದನ್ನು ಮೈಸೂರ ಕರ್ನಾಟಕ ಕಾವ್ಯಕಲಾನಿಧಿಯಲ್ಲಿ ಬಹು ಸುಂದರವಾಗಿ ಅಚ್ಚು ಹಾಕಿದ್ದಾರೆ.

ನಳಚರಿತೆ:—ಇದು ಪ್ರಸಿದ್ಧ ನಳಮಹಾರಾಜನ ಚರಿತ್ರವನ್ನು ತಿಳಿಸುವ ಭಾಮಿನೀ ಷಟ್ಪದಿಯ ಗ್ರಂಥವಾಗಿದೆ. ಇದರಲ್ಲಿ ೯ ಸಂಧಿಗಳೂ ೪೮೧ ಪದ್ಯಗಳೂ ಉಂಟು. ಇದರ ವರ್ಣನಾಭಾಗವಾದರೂ ಬಹು ಮನೋಹರವಾಗಿದೆ. ಈ ಪುಸ್ತಕವೂ ಕಾವ್ಯಕಲಾನಿಧಿಯಲ್ಲಿ ಅಚ್ಚಾಗಿರುವದು.

ರಾಮಧಾನ್ಯ ಚರಿತ್ರೆ:—ಇದೊಂದು ಭಾಮಿನಿ ಷಟ್ಪದೀ ಗ್ರಂಥವು. ೧೫೬ ಪದ್ಯಗಳಿವೆ. ಇದರಲ್ಲಿ ಕವಿಯು—ರಾಮಧಾನ್ಯ ಅಂದರೆ ರಾಗಿಯ ಉತ್ಕೃಷ್ಟತೆಯನ್ನು ಬಹಳ ಚಮತ್ಕಾರವಾಗಿ ಬಣ್ಣಿಸಿದ್ದಾನೆ. ಈ ಧಾನ್ಯಕ್ಕೆ 'ನರೆದಲೆಗ' ಎಂಬ ಹೆಸರಿತ್ತೆಂದೂ ಮುಂದೆ ರಾಮದೇವರು 'ರಾಘವ' ಎಂಬ ತನ್ನ ಹೆಸರನ್ನು ಇಟ್ಟದ್ದರಿಂದ 'ರಾಗಿ' ಎಂಬ ಹೆಸರು ಪ್ರಸಿದ್ಧಿಗೆ ಬಂದಿತ್ತೆಂದೂ ಈ ಗ್ರಂಥದಿಂದ ತಿಳಿಯುವದು.

ಇದರ ಕಥಾಸಾರಾಂಶವು ಹೀಗಿದೆ—ರಾವಣವಧೆಯ ನಂತರ ರಾಮನು ಋಷಿಗಳ ಆಶ್ರಮಕ್ಕೆ ಬಂದು ಅವರು ಕೊಟ್ಟ ಭಕ್ಷ್ಯಗಳ ರುಚಿಯನ್ನು ನೋಡಿ ಅವರು ಉಪಯೋಗಿಸಿದ ಧಾನ್ಯಗಳನ್ನು ತರಿಸುವಂತೆ ಹೇಳಲು, ನರೆದಲೆಗ, ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾವೆ, ನವಣೆ, ಗೋದಿ ಈ ನವಧಾನ್ಯಗಳನ್ನು ತಂದುಸುರಿದರು. ಇವುಗಳಲ್ಲಿ ಯಾವುದು ಶ್ರೇಷ್ಠವೆಂದು ಕೇಳಲು, ಒಬ್ಬೊಬ್ಬರು ಒಂದೊಂದನ್ನು ಹೊಗಳುತ್ತಾರೆ, ಆಗ ನರೆದಲೆಗನಿಗೂ ವ್ರೀಹಿಗೂ

ವಾಗ್ವಾದವಾಗುತ್ತದೆ ಶ್ರೀರಾಮನು ಅಯೋಧ್ಯೆಯಲ್ಲಿ ದೇಶ್ತಗಳನ್ನು ಕರೆಸಿ ಇವುಗಳ ವಿಚಾರಣೆ ಮಾಡುವಂತೆ ಹೇಳಿ ಎರಡನ್ನೂ ಆರು ತಿಂಗಳು ಸೆರೆಯಲ್ಲಿಡಿಸಿ ಹೊರಟು ಹೋದನು. ಬಳಿಕ ಗೌತಮನು ಅತ್ತಿಗಳನ್ನು ಕರಕೊಂಡು ರಾಮನಾ ಸ್ಥಾನಕ್ಕೆ ಹೋಗಲು ಇಂದ್ರನು ವಿಮರ್ಶೆಮಾಡಿ—ನರೆದಲೆಗನು ಸಾರಕ್ಕದಯು ವೆಂದೂ ವ್ರೀಹಿಯು ನಿಃಸಾರವೆಂದೂ ಹೇಳಿದನು ಆಗ ಎಲ್ಲರೂ ನರೆದಲೆಗನಿಗೆ ಬಿರದುಗಳನ್ನು ಕೊಟ್ಟರು. ಶ್ರೀರಾಮನು ಅದನ್ನು ಕರೆದು ರಾಘವ ಎಂಬ ತನ್ನ ಹೆಸರನ್ನು ಕೊಡಲು ವ್ರೀಹಿಯು ನಾಚಿಕೊಂಡು ಶಿರವ ಬಾಗಿಸಿತು.

(ಕವಿಚರಿತ್ರ—ದ್ವಿತೀಯ ಸಂಪುಟ)

ವರಕವಿಯಾದ ಕನಕದಾಸನ ಇಂಥಾ ಅಪೂರ್ವ ಗ್ರಂಥವು ಈ ವರೆಗೂ ಅಚ್ಚಾಗದೆ ಇರುವದು ಕನ್ನಡಿಗರ ಹೇಡಿತನದ ಲಕ್ಷಣವೇ ಸರಿ

ಹರಿಭಕ್ತಿಸಾರ—ಇದು ಭಾಮಿನೀಷಟ್ಪದಿಯಲ್ಲಿದೆ ೧೧೦ ಪದ್ಯಗಳುಂಟು. ಇದು ನೀತಿ-ಭಕ್ತಿ-ವೈರಾಗ್ಯಗಳನ್ನು ಚನ್ನಾಗಿ ಬೋಧಿಸುವದು.

ನೃಸಿಂಹಸ್ತವ—ಇದು ಸಾಂಗತ್ಯ ಗ್ರಂಥ. ೯೭ ಪದ್ಯಗಳಿವೆ, ಕನಕದಾಸ ಕೃತವಾಗಿರಬಹುದು

(ಕವಿಚರಿತೆ)

ದೇವರ ನಾಮುಗಳು—ಕನಕದಾಸನು ಆದಿಕೇಶವಮೂರ್ತಿಯನ್ನೇ ತನ್ನ ಕುಲ ದೇವತೆಯನ್ನಾಗಿ ತಿಳಿದುಕೊಂಡು ಆ ಮುದ್ರಿಕೆಯಿಂದಲೇ ಅನೇಕಾನೇಕ ದೇವರ ನಾಮುಗಳನ್ನು ರಚಿಸಿರುವನು ಇವು ತಾಳ-ಲಯಗಳಿಗೆ ಅನುಗುಣವಾಗಿಯೂ ಭಕ್ತಿಜನಿತವಾಗಿಯೂ ಕಿವಿಗಿಂಪಾಗಿಯೂ ಒಳ್ಳೇ ಪ್ರಾಸಬದ್ಧವಾಗಿಯೂ ಇರು ವವು ಆದರಿಂದ ಕರ್ನಾಟಕದೊಳಗೆ ಎಲ್ಲಿ ನೋಡಿದಲ್ಲಿ ಗಂಡು ರಂಡೆಯರೂ ಇವುಗಳನ್ನು ಸಂತೋಷದಿಂದ ಹಾಡುತ್ತಾರೆ. ಇವುಗಳಲ್ಲಿ ಎಷ್ಟೋ ಪದ್ಯಗಳ ಅರ್ಥತಿಳಿಯುವದು ಪಂಡಿತರಿಗೆ ಮಾತ್ರ ಸಾಧ್ಯವಾಗಬಹುದು. ಇದೇ ಕಾರಣ ದಿಂದ—'ಕನಕನ ಕವಡು' 'ಕನಕಪ್ಪನ ಮಂಡಿಗೆ' ಎಂಬ ನಾಣ್ಣುಡಿಯು ಹುಟ್ಟಾಗಿ ರುವದು ಇಂಥ ಒಂದೆರಡು ಮುಂಡಿಗೆಗಳನ್ನು ವಾಚಕರಿಗೋಸ್ಕರ ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ.

## ಕಾಲವಿಚಾರ.

ಈತನು ತನ್ನ ಗ್ರಂಥದಲ್ಲಿ 'ವಾಲ್ಮೀಕಿ ವ್ಯಾಸಪುರಾಣಿಗಳನ್ನು ಕನ್ನಡಿಸಿದ ಕವಿವರ'ರನ್ನು ಸ್ತುತಿಸಿರುತ್ತಾನೆ. ಕುಮಾರ ವ್ಯಾಸನ ಕಾಲವು ೧೪೩೦ ಎಂತಲೂ

ಕುಂಬಾರ ವಾಲ್ಮೀಕಿಯ ಕಾಲವು ೧೫೦೦ ಎಂತಲೂ ತಿಳಿದು ಬಂದಿರುವದು. ಅಂದ ಮೇಲೆ ಈತನು ೧೫೦೦ ಕ್ಕಿಂತಲೂ ಹಿರಿಯವನಾಗಿರದೇಕೆಂಬುದು ಸ್ಪಷ್ಟವಾಯಿತು. ಇನ್ನು—ಈತನು ಶ್ರೀ ವ್ಯಾಸರಾಯರ ಶಿಷ್ಯನಾಗಿ ಎಷ್ಟೋ ದಿನ ಸಂಚರಿಸಿದ್ದದ್ದು ಪ್ರಖ್ಯಾತ ವಿಷಯವಾದ್ದರಿಂದಲೂ, ಆ ವ್ಯಾಸರಾಯರು ವಿಜಯನಗರದ ಕೃಷ್ಣರಾಯ (೧೫೦೯-೧೫೨೯) ಅಚ್ಯುತರಾಯರ (೧೫೩೦-೧೫೪೨) ಕಾಲದಲ್ಲಿದ್ದು ಅಚ್ಯುತರಾಯರ ಕಾಲದಲ್ಲಿಯೇ ಮುಕ್ತರಾದರೆಂದು ತಿಳಿದು ಬಂದದ್ದರಿಂದಲೂ ಕನಕದಾಸನು ಈ ಕಾಲದವನೆಂದು ಗೊತ್ತಾಗುವದು. ಇದಲ್ಲದೆ—

ಶ್ರೀಪುರಂದರ ದಾಸರು ೧೫೩೪ ರಲ್ಲಿ ವ್ಯಾಸರಾಯರ ಶಿಷ್ಯರಾಗಿ ವಿಜಯನಗರಕ್ಕೆ ಬಂದರಂತೆ. ಇವರು ಕನಕದಾಸನನ್ನು ಒಂದು ಕಡೆಯಲ್ಲಿ ಸ್ತುತಿಸಿರುವರು. (೨ನೇ ೩ನೇ ಕಥೆಗಳ ಕೆಳಗಿನ ಪದ್ಯನೋಡಿರಿ)

---

ತನುವಿಲ್ಲದಲ್ಲಿ ಪ್ರಾಣಪ್ರತಿಷ್ಠೆಯು ಕಟ್ಟೆ | ಯನುಗೊಳಿಸ ದಾರು ರಸಸ್ಥಾಪನೆಯು ಭಿತ್ತಿಯೊಂ | ದಿಸಿಲ್ಲದತಿ ಚಿತ್ರಮುಂ ರೂಪದೋರದೆಡೆಯೊಳ್ ಪಲವಲಂಕಾರಮುಂ ||

ಮನೆಯಿಲ್ಲದರ್ಥ ಸಂಚಿತವನುಂ ಮೀರೆಯಿರ | ದನುಪಮ ಕ್ರಿಯೆಗಳಂ ನಡೆಯಿಪ ಕವೀಶ್ವರರ | ಘನತಿಯುಂ ಬಣ್ಣಿಸುವ ರಾರಾನೆಹೋದುದೆ ಬೀದಿಯಲ್ಲವೆ ಜಗದೊಳು || ೧ || (ನಂದಿಮಾಹಾತ್ಮ್ಯ)

---

## ಗ್ರಂಥಗಳು.

ಇತರ ಹರಿದಾಸರಂತೆ ಈತನು ದಾಸನಾಗಿ ಬರೇ ದೇವರ ನಾಮಗಳನ್ನು ಹೇಳಿ ಬಿಡಲಿಲ್ಲ. ಅನೇಕ ಗ್ರಂಥಗಳನ್ನು ಬರೆದನು. ಇದರಿಂದ ಇವನ ಹೆಸರು ಕರ್ಣಾಟಕದಲ್ಲಿ ಆಚಂದ್ರಾರ್ಕವಾಗಿರುವದು ಕನ್ನಡ ವಾಙ್ಮಯದಲ್ಲಿ ಒಳ್ಳೊಳ್ಳೇ ಪಂಡಿತರಾದ ಪ್ರಸಿದ್ಧ ಕವಿಗಳು ರಾಜಾಶ್ರಯದಿಂದಲೋ ಲೋಕಾಶ್ರಯದಿಂದಲೋ ಬಹಳ ಪರಿಶ್ರಮಮಾಡಿ ಗ್ರಂಥಗಳನ್ನು ಬರೆದಿರುವರು ಈತನಾದರೋ ಓದು-ಬರಹವನ್ನು ಕೂಡಾ ಕಲಿಯದೆ—ಯಾರ ಆಶ್ರಯವನ್ನೂ ಹೊಂದದೆ ಶ್ರಮಪಡದವನಂತೆಯೇ ಗ್ರಂಥಬರೆದದ್ದನ್ನು ನೋಡಿದರೆ ವರಕವಿ ಯೆಂಬುವದರಲ್ಲಿ ಆವ ಸಂದೇಹವೂ ಇಲ್ಲ. ಈತನ ಗ್ರಂಥಗಳೆಂದರೆ—ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯಚರಿತ್ರೆ, ಹರಿಭಕ್ತಿಸಾರ, ನೃಸಿಂಹಸ್ತವ ಎಂಬವು.

ಮೋಹನತರಂಗಿಣಿ—ಇದನ್ನು ಎಲ್ಲಿ—ಯಾಕೆ ಬರೆದನೆಂಬದನ್ನು ೧೯ನೇ ಕಥೆಯಲ್ಲಿ ವಿಸ್ತರಿಸಿದ್ದೇವೆ. ಈ ಗ್ರಂಥವು ಸಾಂಗತ್ಯರೂಪವಾಗಿ ಕೃಷ್ಣಚರಿತ್ರ ವನ್ನು ಬಣ್ಣಿಸುವದು. ಇದರಲ್ಲಿ ೪೨ ಸಂಧಿಗಳೂ ೨೭೦೫ ಪದ್ಯಗಳೂ ಉಂಟು. ಇದರ ಉತ್ಕೃಷ್ಟತೆಯನ್ನು—

ಹರಿಶರಣರ ಪೆಡ೯ ಬುಧಜನರಿಗೆ ವೆಚ್ಚು | ದುರಿತಕೋಟಿಗೆ ಕಾಳ್ಕಿಚ್ಚು ||
ವಿರಹಿಗಳಿಗೆ ಮುಚ್ಚು ವೀರರಿಗೆ ಪುಚ್ಚು ಕೇ | ಳ್ವರಿಗಿದು ಕನಿಬೆಲ್ಲದಚ್ಚು ||

ಎಂಬದಾಗಿ ಹೇಳಿಕೊಂಡದ್ದು ಸುಮ್ಮನೆ ಡಂಭಾಚಾರಕ್ಕಲ್ಲ, ಕವಿಸಾಂಪ್ರದಾಯವೂ ಅಲ್ಲ, ಇವೆಲ್ಲವುಗಳ ಮೇಲಿಂದ ಈತನ ಕಾಲವನ್ನು ೧೫೫೦ ಎಂದು ಊಹಿಸಿರುವರು. ಕೆಲವರು ಈತನು ಹುಟ್ಟಿದ್ದು ಶಕ ೧೨೩೫ ನೇ ಆನಂದನಾಮ ಸಂವತ್ಸರವೆಂದು ಹೇಳುತ್ತಿರುವರು. ಮೇಲಿನ ಪ್ರಮಾಣಗಳಿಂದ ಇದು ಸುಳ್ಳೆಂದು ಸ್ಪಷ್ಟವಾಗುವದು. ಈತನು ೯೮ ವರ್ಷದವನಾಗಿ ದೇಹವಿಟ್ಟನೆಂದು ಐತಿಹ್ಯವುಂಟು.

ಕಡೆತನಕ ದೇವತಾರಾಧನೆಯಲ್ಲಿಯೇ ಕಾಲಕಳೆದನು. ಕಡೆಗೆ ಈ ಜಡದೇಹವು ಅವನಿಗೆ ಬೇಸರವಾಯಿತು. ಆಗ ಆತನು ದೇವರಿಗೆ ಶರಣಾಗತನಾಗಿ—ನನ್ನನ್ನು ನಿನ್ನ ಹೃತ್ಕಮಲದಲ್ಲಿಯೇ ಇಟ್ಟುಕೊಳ್ಳೆಂದು ಬೇಡಿಕೊಂಡನು. ಭಕ್ತರ ಭಿಡೆಯು ಹೆಚ್ಚಿನದು. ಕೂಡಲೇ ದೇವರು ಬಾಯ್ದೆರೆದನಂತೆ ಕನಕನು ಆತನಲ್ಲಿ ಐಕ್ಯವಾದನಂತೆ ಆಹಾ! ಕನಕದಾಸನು ಮಾನವ ಜನ್ಮಕ್ಕೆ ಬಂದದ್ದು ಸಾರ್ಥಕ ವಾಯಿತು ಆತನು ಇಂದಿಗೆ ಧನ್ಯನು, ಮಾನ್ಯನು. ಪವಿತ್ರನು.

ಕಾಗಿನೆಲ್ಲಿಯಲ್ಲಿರುವ ಶ್ರೀ ಆದಿಕೇಶವಮೂರ್ತಿಯು ಗದ್ದಿಗೆಯು ಕೆಳಭಾಗ ದಲ್ಲಿ ಇವತ್ತಿಗೂ ಒಂದು ಸಣ್ಣ ಮೂರ್ತಿಯಿದ್ದು ಅದನ್ನೇ ಕನಕನೆಂದು ಹೇಳುತ್ತಾರೆ

## ನಾಮಾವಳಿಪದ.

(ರಾಗ | ಹರಿಕಲ್ಯಾಣಿ | ಆದಿತಾಳ.)

ಈಶ ನಿನ್ನ ಚರಣಭಜನೆ | ಆಸೆಯಿಂದ ಮಾಡುವೆನು || ದೋಷರಾಶಿ ನಾಶ ಮಾಡು ಶ್ರೀಶಕೇಶವಾ || ಪ ||

ಶರಣುಹೊಕ್ಕೆನಯ್ಯ ಎನ್ನ | ಮರಣಸಮಯದಲ್ಲಿ ನಿನ್ನ || ಚರಣಸ್ಮರಣೆ ಕರುಣಿಸಯ್ಯ | ನಾರಾಯಣಾ || ೧ ||

ಶೋಧಿಸೆನ್ನ ಭವದ ಕಲುಷ | ಬೋಧಿಸಯ್ಯ ಜ್ಞಾನವೆನಗೆ || ಬಾಧಿಸುವ ಯಮನ ಬಾಧೆ ಬಿಡಿಸು ಮಾಧವಾ || ೨ ||

ಹಿಂದನೇಕ ಯೋನಿಯಲ್ಲಿ | ಒಂದು ಒಂದು ನೊಂದೆನಾನು || ಇಂದು ಭವಬಂಧ ಬಿಡಿಸೋ | ತಂದೆ ಗೋವಿಂದಾ || ೩ ||

ಧೃಷ್ಟನೆನಿಸಬ್ಯಾಡ ಕೃಷ್ಣ | ಇಷ್ಟು ಮಾತ್ರ ಬೇಡಿಕೊಂಬೆ || ಶಿಷ್ಟರೊಡನೆ ಇಟ್ಟು ಕಷ್ಟಬಿಡಿಸು ವಿಷ್ಣುವೆ || ೪ ||

ಮೊದಲು ನಿನ್ನ ಪಾದಪೂಜೆ | ಮುದದಿ ಮಾಡುವೆನು ನಾನು || ಹೃದಯದೊಳಗೆ ಅಡಗಿಸಯ್ಯಾ ಮಧುಸೂದನಾ || ೫ ||

ಕವಿದುಕೊಂಡು ಇರುವ ಪಾಪ | ಸವಿದು ಹೋಗುವಂತೆ ಮಾಡಿ || ಜವನಬಾಧೆಯನ್ನು ಬಿಡಿಸು ತ್ರಿವಿಕ್ರಮಾ || ೬ ||

ಕಾಮಜನಕ ನಿನ್ನ ನಾಮ | ಪ್ರೇಮದಿಂದ ಪಾಡುವಂಥ || ನೇಮ ಎನಗೆ ಪಾಲಿಸಯ್ಯ ಸ್ವಾಮಿ ವಾಮನಾ || ೭ ||

ಮದನನಯ್ಯ ನಿನ್ನ ಮಹಿಮೆ | ವದನದಲ್ಲಿ ಒದರುವಂತೆ || ಹೃದಯದಲ್ಲಿ ಸದನ ಮಾಡು ಮುದದಿ ಶ್ರೀಧರಾ || ೮ ||

ಹುಸಿಯನಾಡಿ ಹೊಟ್ಟೆಹೊರೆವ | ವಿಷಯದಲ್ಲಿ ಸಿಲುಕನೆಂದು || ಕುಸಿಯ ಹಾಕದಿರಯ್ಯ | ಹೃಷೀಕೇಶನಾ || ೯ ||

ಬಿದ್ದು ಅಬ್ಧಿಯೊಳಗೆ ನಾನು | ಒದ್ದುಕೊಂಬೆನಯ್ಯ ಭವದಿ || ಗೆದ್ದು ಪೋಪ ಬುದ್ಧಿ ತೋರೊ | ಪದ್ಮನಾಭನೆ || ೧೦ ||

ಕಾಮ-ಕ್ರೋಧ ಬಿಡಿಸಿ ನಿನ್ನ | ನಾಮ-ಜಿಹ್ವೆಯೊಳಗೆ ನುಡಿಸು || ಶ್ರೀ ಮಹಾನುಭಾವನಾದ | ದಾಮೋದರಾ || ೧೧ ||

ಪಂಕಜಾಕ್ಷ ನೀನೆ ಎನ್ನ | ಮಂಕುಬುದ್ಧಿ ಬಿಡಿಸಿ ನಿನ್ನ || ಕಿಂಕರನ ಮಾಡಿಕೊಳ್ಳೊ | ಸಂಕರುಷಣಾ || ೧೨ ||

ಏಸು ಜನ್ಮ ಬಂದರೇನು | ದಾಸನಾಗಲಿಲ್ಲವಾನು || ಘಾಸಿಮಾಡದಿರು ಇನ್ನು | ವಾಸುದೇವನೆ || ೧೩ ||

ಬುದ್ಧಿಶೂನ್ಯವಾಗಿ ಎನಗೆ | ಕದ್ದುಕಳ್ಳನಾದೆ ನಿನಗೆ || ತಿದ್ದಿ ಹೃದಯ ಶುದ್ಧಿ ಮಾಡೊ | ಪ್ರದ್ಯುಮ್ನನೆ || ೧೪ ||

ಜನನಿ-ಜನಕ ನೀನೆಯೆಂದು | ಎನುವೆನಯ್ಯ ದೀನಬಂಧು || ಎನಗೆ ಮುಕ್ತಿ ಪಾಲಿಸಿಂದು | ಅನಿರುದ್ಧನೆ || ೧೫ ||

ಹರುಷದಿಂದ ನಿನ್ನ ನಾಮ | ಸ್ಮರಿಸುವಂತೆ ಮಾಡೊ ಪ್ರೇಮ || ಇರಿಸು ಚರಣದಲ್ಲಿ ಪ್ರೇಮ | ಪುರುಷೋತ್ತಮಾ || ೧೬ ||

ಸಾಧುಸಂಗ ಕೊಟ್ಟು ನಿನ್ನ | ಪಾದಭಜಕನೆನಿಸು ಎನ್ನ || ಭೇದ ಮಾಡ ದಿರು ಇನ್ನು | ಅಧೋಕ್ಷಜಾ || ೧೭ ||

ಚಾರುಚರಣ ತೋರಿ ಎನಗೆ | ಪಾರುಗಾಣಿಸಯ್ಯ ಕೊನೆಗೆ || ಭಾರ ಹಾಕಿ ರುವೆ ನಿನಗೆ | ನಾರಸಿಂಹನೆ || ೧೮ ||

ಸಂಚಿತಾರ್ಥ ಪಾಪಿಗಳನು | ಕಿಂಚಿದಾದರೀಡದಂತೆ || ಮುಂಚಿತಾಗಿ ಕಳೆಯಬೇಕು ಸ್ವಾಮಿ ಅಚ್ಯುತಾ || ೧೯ ||

ಜ್ಞಾನ-ಭಕ್ತಿ ಕೊಟ್ಟು ನಿನ್ನ | ಧ್ಯಾನದಲ್ಲಿ ಇಟ್ಟು ಎನ್ನ || ಹೀನಬುದ್ಧಿ ಬಿಡಿಸು ಮುನ್ನ ಜನಾರ್ದನಾ || ೨೦ ||

ಜಪ-ತಪಾನುಷ್ಠಾನವಿಲ್ಲದೆ | ಕುಪಥಗಾಮಿಯಾದ ಎನ್ನ || ಕೃಪೆಯ ಮಾಡಿ ಕ್ಷಮಿಸಬೇಕೊ | ಉಪೇಂದ್ರನೆ || ೨೧ ||

ಮೊರೆಯಯಿಡುವೆನಯ್ಯ ನಿನಗೆ | ಸೆರೆಯ ಬಿಡಿಸು ಭವದಿ ಎನಗೆ || ಇರಿಸು ನಿನ್ನ ಭಕ್ತರೊಳಗೆ | ಪರಮಪುರುಷ ಶ್ರೀಹರೆ || ೨೨ ||

ಪುಟ್ಟಿಸಬ್ಯಾಡಯಿನ್ನು | ಪುಟ್ಟಿಸಿದಕೆ ಪಾಲಿಸಿನ್ನು || ಇಷ್ಟು ಬೇಡಿಕೊಂಬೆ ನಾನು | ಶ್ರೀ ಕೃಷ್ಣನೆ || ೨೩ ||

ಸತ್ಯವಾದ ನಾಮಗಳ | ನಿತ್ಯದಲಿ ಪಠಿಸುವರಿಗೆ || ಅರ್ಥಿಯಿಂದ ಸಲ ಹುವ | ಕರ್ತಕೇಶವಾ || ೨೪ ||

ಮರೆತು ಬಿಡದೆ ಹರಿಯ ನಾಮ | ಬರೆದು ಓದಿ ಕೇಳಿದರಿಗೆ || ಕರೆದು ಮುಕ್ತಿ ಕೊಡುವ | ನೆಲೆಯಾದಿಕೇಶವ || ೨೫ ||

---

## ಸಮಾಪ್ತೋಯಮ್.

## ಪರಿಶಿಷ್ಟ [ಅ]

# ಕನಕಪ್ಪನ ಮುಂಡಿಗೆಗಳು.



೧ ರಾಗ | ಸೌರಾಷ್ಟ್ರ | ಚಾಪುತಾಳ |

ಮುತ್ತುಗಳಾ ಹಣ್ಣು ಕಾಯಾದ ಬಳಿಕಿನ್ನು | ಮತ್ತೊಂದು ಚೋದ್ಯ ಕೇಳೀ || ಚಿತ್ರದ ಹೂವಿನ ಹವಳಕಾಯಾಗುವ | ಅರ್ಥವ ತಿಳಿದತ್ತಪೇಳಿ || ೧ ||

ಸುಟ್ಟು ಬೀಜವ ಬಿತ್ತಿ ಬೆಳೆಯಬಾರದ ಕಾಯಿ | ಬೆಟ್ಟದಿ ನಾರವನು ||

ತೊಟ್ಟು ಇಲ್ಲದ ಹಣ್ಣು | ಮುಟ್ಟಿ ಕಾಯ್ವನು ಒಬ್ಬ ಹುಟ್ಟು ಬಂಜೆಯ ಮಗನು || ೨ ||

ಒಣಗಿದ್ದ ಮರವೇರಿ ಹಣ್ಣ ಕಾಯುನು ಮಗ | ದಣಿಯದೆ ಮೆದ್ದಿಳಿದಾ || ರಣದಲ್ಲಿ ತಲೆಹೊಯ್ದು ರುಂಡವು ದೀಳಲು | ಹೆಣವೆದ್ದು ಕುಣಿದಾಡಿತು || ೩ ||

ಕಣ್ಣಿಲ್ಲದಾತನು ಕಂಡುಪಿಡಿದ ಮೃಗ | ಕೈಯಿಲ್ಲದಾತನೆಚ್ಚಾ || ಮಣ್ಣಲಿ ಹೊರಳುವ ಕಾಲಿಲ್ಲದಾತನು | ಗಣ್ಯವಿಲ್ಲದೆ ಪಿಡಿದಾ || ೪ ||

ಎಲ್ಲರೂ ಹೇಳಿರಿ ಕನಕಹೇಳಿದ ಮಾತ | ಎಲ್ಲರೂ ಗ್ರಹಿಸಿಕೊಳ್ಳೀ || ಬೆಳ್ಳೀ ಕಣ್ಣಿನವಗೆ ತಿಳಿಯಲಾರದ ಮಾತು | ಒಲ್ಲಾದಿಕೇಶವನು || ೫ ||

೨ ರಾಗ | ಹಿಂದುಸ್ಥಾನಿ ಕಾಪಿ | ಮಟ್ಟತಾಳ |

ಹಲವು ಜೀವನವ ಒಂದೆಲೆ ನುಂಗಿತು | ನೆಲೆಯಾದಿಕೇಶವನು ಬಲ್ಲ ಈ ಬೆಡಗಾ || ಪಲ್ಲ ||

ಹರಿಯು ನುಂಗಿತು ಹರ-ಬ್ರಹ್ಮನ ನುಂಗಿತು | ಸುರರಿಗುಂಟಾದ ದೇವರ ನುಂಗಿತು | ಉರಿಗಣ್ಣಶಿವನ ಒಂದೆಲೆನುಂಗಿತೊದೇವ | ಹರಿಯು ಒಳಗವ ಒಂದೆಲೆ ನುಂಗಿತು || ೧ || ಎಂಟು ಗಜವ ನುಂಗಿತು ಉಂಟಾದ ಗಿರಿಯು ತಲೆಯನುಂಗಿತು || ಕಂಠವ ಪಿಡಿದ ಬ್ರಹ್ಮನ ನುಂಗಿತೆಲೊದೇವ | ಎಂಟಾರುಲೋಕ ಒಂದೆಲೆನುಂಗಿತು ||೨||

ಗಿಡವನುಂಗಿತು ಗಿಡದೊಡಕೊಟ್ಟನುಂಗಿತು | ಗಿಡವನ ತಾಯಿತಂದೆಯು ನುಂಗಿತು || ಬೆಡಗ ಬಲ್ಲರೆ ಪೇಳಿ ದೇವ ಕನಕದಾಸ ಎ | ನ್ನೊಡೆಯಾದಿಕೇಶವ ಬಲ್ಲ ಈ ಬೆಡಗಾ || ೩ ||

೩ ರಾಗ | ಸೌರಾಷ್ಟ್ರ | ಮಟ್ಟತಾಳ |

ಮೂರುಬೀಜವು ಬಿತ್ತಿ ಸಹಜ ಬೀಜವು ತೋರಿ | ರಾಯರಿಗೆ ಒಂದುಪಾಲು ರಾಜ್ಯಕ್ಕೆ ಎರಡೂ || ಪ || ಕರಿಯಬೀಜಕೆ ಕಾಯಿ ಬಿಳಿಯಬೀಜಕೆ ಬೇರು | ಮತ್ತೊಂದು ಬೀಜಕ್ಕೆ ಹದಿನೆಂಟು ಬೇರು || ೧ || ರಂಜಕದ ಬೇಂಗೆ ರಾಗ ಮೂವತ್ತೆರಡು | ಕುಂಜರದ ಗಮನೆಯ ವೇಳ ನೆಹಿಂಬಂದನೇ || ೨ || ಐದುಮಾರಿನ ಮ್ಯಾಲೆ ಮುದ್ದಿಯ ಕಲಿಸಿ | ಬದಲೋಲಭ್ಯರು ಪೇಳಿ ಸೊಬಗಿನ ಬೆಡಗಾ || ೩ || ಎರಡುನಂದಿಯ ಹೂಡಿ ಗರುಡತಾ ಹೆಸಿನೇರಿ || ಹೊರಗೆ ಮುಚ್ಚಿ ಕೋಲು ನೆರದಿಎಂದು || ೪ || ಹರಿದಾಸರ ಕನಕ ಹಾಕಿದ ನುಡಿಕೆಯ | ಆದಿಕೇಶವನಾಣೆ ಬಲ್ಲವರು ಹೇಳಿ || ೫ ||

೪ ರಾಗ — ಕಲ್ಯಾಣಿ, ಆದಿತಾಳ

ಒಲ್ಲವರು ನೀವು ಪೇಳಿರಯ್ಯಾ ಭಾವದುರ್ಭಳಯಾರ್ಥವಿದು || ಎಲ್ಲರಿಗೆ ಸಮ್ಮತವಾದೀನಾಮಾ || ಪಲ್ಲ || ಚಿತ್ತಾನಕ್ಷತ್ರದಲಿ ಪುಟ್ಟಿದಾತನ ಸೊಸೆ | ಮೃತ್ಯುವೆಂದ್ಧೆಣಿಸಿ ಹೊರಡಿಸಿದಾತನಾ || ಉತ್ತರಾಯಣ ಮಾವನಮಗ ನೀಳಳುಹಿದರ | ಹೊತ್ತು ಹೋಗದು ಎನಗೆ ತೋರೆ ತಳಾಕ್ಷೀ || ೧ || ಅತ್ತ ಅಣ್ಣನ ಅಗ್ರಜನ ಕೈಯಿಂದ | ಒತ್ತರಿಸಿ ನಾಡಿ [illegible] ಕೊಂಡಾತನ || ಉತ್ತಕೊಪ್ಪದೊಳಗೆ ಹವ್ಯತಂಗಿಯ ಕೊಂಡು | ಮತ್ತ್ಯದೇವರಾಡಿ ಮೊಮ್ಮಗನ ಪಡೆದಿಹನು || ೨ || ಉರಿಯುವನ ದಾಸರ ಹೆಳಿಲೂರಿದಾತನಾ | ಧರೆಯೊಳಗೆ ಮೆರೆವರನು || ಗೆಲಿದು ವಾರ್ತೆಯ ತರದ | ಮಂಗಳಗಿನೆಲೆಯಾದಿಕೇಶವನ ಮಹಿಮೆಯನು || ೩ ||

೫ ರಾಗ — ಸೌರಾಷ್ಟ್ರ ಅಟತಾಳ.

ಒಂಟೆತ್ತು ಹೂವಿಗೆ ಒಂದೆ ಎಳೆವು ಚಂದಮಾಮಾ || ಪಲ್ಲ || ತುಂಬಿನಾಳ ತುದಿ ತುಂಬಿ ಭಾನುಪ್ರಭೆ ಚಂದಮಾಮಾ | ಅ-ಪ || ಕದರುಗಾತರ ಕಂಭ ತೆಕ್ಕೆಗಾತರ ಹೂವು ಚಂದಮಾಮಾ | ಆನೆಗಾತರಕಾಯಿ ಒಂಟೆಗಾತರಹಣ್ಣು ಚಂದಮಾಮಾ || ೧ || ಕಾಲಿಲ್ಲದಾತನು ಹತ್ತಿದನಾಮರ ಚಂದಮಾಮಾ | ಕೈಯಿಲ್ಲದಾತನು ಕೊಯ್ದನು ಆ ಹಣ್ಣು ಚಂದಮಾಮಾ || ೨ || ನೆತ್ತಿಲ್ಲದಾತನು ಹೊತ್ತನು ಆ ಹಣ್ಣು ಚಂದಮಾಮಾ | ತಳವಿಲ್ಲದ ಗೂಡಲ್ಲಿ ಇಳಿದನಾ ಹಣ್ಣು ಚಂದಮಾಮಾ || ೩ || ಮಾಗಳ ತಪ್ಪಿ ಮಾಗಳ ಹಿಡಿದು ನಡೆದರು ಚಂದಮಾಮಾ | ಸದ್ದಿಲ್ಲದಾಸಂತೇಲಿಳಿಸಿದ ರಾಹಣ್ಣು ಚಂದಮಾಮಾ || ೪ || ರೊಕ್ಕವಿಲ್ಲದಾತ ಕೊಂಡಾನು ಆ ಹಣ್ಣು ಚಂದಮಾಮಾ | ಮೂಗಿಲ್ಲದಾತನು ಮೂಸಿದನಾಹಣ್ಣು ಚಂದಮಾಮಾ || ೫ || ಕಣ್ಣಿಲ್ಲದಾತನು ಕಂಡಾನೆ ಕಣ್ಣಿಂದ ಚಂದಮಾಮಾ | ಅಂಗವಿಲ್ಲದಾತ ನುಂಗಿದಾನಾ ಹಣ್ಣು ಚಂದಮಾಮಾ || ೬ || ಬಾಯಿಲ್ಲದ ತಿಂದು ಬಸುರಲ್ಲಿ ಇಂಬಿಟ್ಟು ಚಂದಮಾಮಾ | ಸುಲಭಪದವಿದು ನಳಿನಜಾಂಡದೊಳು ಚಂದಮಾಮಾ || ೭ || ಗುರುವಿನ ಮಹಿಮೆಯು ಗುರುವೆ ತಾ ಬಲ್ಲನು ಚಂದಮಾಮಾ | ಮೂಢನಾದವ ಏನುಬಲ್ಲನು ಈ ಮಾತುಚಂದ ಮಾಮಾ || ೮ || ಕನಕನಾಡಿದ ಗುಟ್ಟು ಆದಿಕೇಶವಬಲ್ಲ ಚಂದಮಾಮಾ | ತಿಳಿದವರು ಪೇಳಿರೈ ಹಳೆಗನ್ನಡ ಚಂದಮಾಮಾ || ೯ ||

೬ ರಾಗ | ಸಾವೇರಿ | ಆದಿತಾಳ |

ಬಾರೊ ಬಾಯ್ಯ ಮನೆಗೆ | ಭಾವಜನಯ್ಯ | ಬಾರದಿದ್ದರೆ ಎನ್ನ ಮನವು ನಿಲ್ಲದೊ ರಂಗಾ || ಪ || ಅತ್ತಿಗಿವ್ಯೆದುನ ಬಾರೊ ಅತ್ತಿಗಿ ಮಗಳಗಂಡ | ಅತಿಗಿ

ಮಾಲಕ್ಷ್ಮಿ ಮಗಳ ಸೊಸಿಯು ಗಂಡ || ೧ || ಮಾನಸ ಮಗಬಾರೊ ಮಾವಭಾವ ನಣುಗ | ರಾವನ ಕೊಂದದೀಯಾ ಮಗಳ ಸೊಸಿಯು (ತಂಗಿಯು) ಗಂಡ || ೨ || ಅಂಬುಧಿಶಯನನೆ ಬಾರೊ ಆದಿವ ರಾಮತಿ ರಂಗಾ | ಕಂಭದೊಳು ನೆಲಿಸಿದ ಆದಿ ಕೇಶವರಾಯಾ || ೩ ||

ೞ ರಾಗ. ಕಾಂಬೋಧಿ ಝಂಪೆ ತಾಳ.

ಓಕೊ ಎನ ಜೀವಾ ವೈಯೆಲ್ಲಾ ನವಘಾಯ | ಗಾಯ ಕಟ್ಟುವರಿಲ್ಲ ಗಾಳಿ ಹಾಕುವರಿಲ್ಲಾ || ಪಲ್ಲ || ಮಾಡಿಲ್ಲ ಮಳೆಯಿಲ್ಲ ವ ರದವ್ಯಾಲೆ ನೀರ ಕಂಡೆ|| ಕಾಡು ಸುಡುವದು ಕಂಡೆ ಬೂದಿಯ ಕಾಣಲಿಲ್ಲಾ || ೧ || ಅಡಿಕೆಷ್ಟು ಆಕ ಳಣ್ಣಾ ಹಿಡಿಕೆಷ್ಟು ಕೆಜ್ಜಲಣ್ಣಾ || ಕದರಾರ ಕರಿತ್ರೈತಿ ರಂಜಣಗಿ ಹಾಲಣ್ಣಾ ||೨|| ಮೂರು ಮೊಳದ ತೋಟಣ್ಣಾ ಆರು ಪೇಳಟ ಕಾಯಣ್ಣಾ || ಕಾಯಿ ಕೊಯ್ಯುವ ಕುಡಗೋಲು ಹದಿನಾರು ಮೊಳ ಣ್ಣಾ || ೩ || ಊರಮುಂದೆ ಹಿರಣ್ಯಾಕನ ಕೊರಳ ಕೊಯ್ವುದ ಕಂಡೆ || ಕೊರಳ ಕೊಯ್ವುದ ಕಂಡೆ ರಕುತವ ಕಾಣಲಿಲ್ಲಾ || ೪ || ಕಾಗಿನೆಲಿಯ ಕನಕದಾಸ ಹೇಳಿವಂಥ ಮುಂ | ಡಿಗೆಯ ಬಲ್ಲನು ಆದಿ ಕೇಶವನೊಬ್ಬನು || ೫ ||

ೡ ರಾಗ | ತಾಳ |

ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದದೆ || ಪಲ್ಲ ||
ಒಂಟಿಗೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ | ಗಂಟಲ ಮೂರುಂಟು ಮೂಗು ಇಲ್ಲಾ || ಕುಂಟ ಮನುಜಾನಂತೆ ಕುಳಿತಿಹದು ಮನೆಯೊಳಗ | ಎಂಟು ಹತ್ತರ ಬಣ್ಣ ಭಕ್ಷಿಸುವದು || ೧ || ನಡುವೆ ತಲೆಯೆಂಬುವದು ನಡುನೆತ್ತಿಯಲಿ ಬಾಯಿ ಬಹು ಸ್ವರಗಳಿಂದ ಗಾಯನ ಮಾಳ್ಪದು || ಅಂಗುಲಿ ಹುಟ್ಟುವದು ಅಂಗ ಎರ ಡಾಗುವದು | ಬಡತನ ಬಂದರೆ ಬಹಳ ರಕ್ಷಿಪುದು || ೨ ||ಕಂಜ ವದನೆಯರ ಕರ ದಲ್ಲಿ ನಲಿದಾಡುವದು | ಎಂಜಲ ಉಣಿಸುವದು ಮಾರ್ಜಕಗಕೆ || ರಂಜಿಪ ಶಿಖಾ ಮಣಿ ಸಿಂಹಾಸನದ ಮೇಲಿಪ್ಪ | ಆದಿಕೇಶವರಾಯ ತಾನೆ ಬಲ್ಲ || ೩ ||



ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಪ. ಕಾಳೆ,
ಇವರಿಂದ ಮುದ್ರಿಸಲ್ಪಟ್ಟಿತು.